(पृष्ठ ९ का शेष)

यह तिलक कब कैसे धारण करना चाहिये इस जिज्ञासा के समाधानार्थ कहते हैं—

स्नात्वा विधानत: पूर्वमूर्ध्वपुड्र धारण करे वैष्णवजन श्वेत मृत्तिका से उसके अभाव में चन्दन तिलक लगाये। मृत्तिका पर विशेष आग्रह इसलिये है—कि श्रीवैष्णवजन मुमुक्षु होते है। सात्विक होते है। मृत्तिका में भूदेवी का निवास है श्वेत वर्ण विष्णु को प्रिय है 'शुक्लाम्बरधर विष्णुं शशिवर्णं' यह सत्व ज्ञान वर्धक है। चन्दन राजस है, कस्तूरी भी राजस है।

चन्दन प्राणिगन्धञ्च श्रीपत्रमगुरुन्तथा।
राजसं द्रव्यमेवैतद् वदन्ति ब्रह्मवादिन.॥

राजस द्रव्यो के सम्पर्क से राजसीय भाव का होना स्वाभाविक है। 'सत्वात्संजायते ज्ञानं रजसो लोभ एव च' गीता जी में सत्व को ज्ञानोत्पादक एव रज को लोभ कारक बताया है। वैष्णव जनो को लोभ भी सात्विक ग्राह्य है। जैसे भगवत् प्रसादी तुलसी पुष्प चन्दन प्रसाद प्राप्ति का लोभ, वैष्णवाराधन के लिये लोभ ग्राह्य है। इसलिये सात्विक मृत्तिका का तिलक वैष्णव करते है। 'सात्विका: पञ्च मृत्तिका:, पाँच मृत्तिकायें सात्विक है 'मुक्तिदा पञ्च मुच्चैव, सात्विक मृत्तिका मुक्ति देने वाली है क्योंकि यह उद्धृतासि वराहेण, भूदेवी को श्री वराह भगवान ने धारण किया, प्रतिष्ठित भी किया। हरि को अत्यन्त अभिमत होने से भूदेवी सबको माना है। नास्तिक भी अपनी जन्मदातृ भू पर स्वाभिमान करते है। इसी श्रेष्ठता को ध्यान कर—

अश्वकान्ते रथकान्ते विष्णुक्रान्ते वसुन्धरे।
मृत्तिके हर मे पाप सर्वपापहरा भव॥

वैष्णव जन मन्त्र से प्रार्थना करते हैं। 'तस्मा च्छ्रेष्ठतरा तु मृत् अतएव मृत्तिका से ऊर्ध्वपुण्ड्र करना श्रेष्ठ है।

यह मृत्तिका कहाँ से ग्रहण करनी चाहिये इस प्रश्न के उत्तर में कहा गया कि 'पर्वताग्रे नदीतीरे.. मम क्षेत्रे विशेषत:।' हरि क्षेत्र की मृत्तिका श्रेष्ठ बताई है। इसी कारण श्रीरङ्गम् श्रीपुष्कर श्रीवेंकटाद्रि श्रीचित्रकूट श्रीवृन्दावन की मृत्तिका ग्रहण का विधान है। इनके अभाव में तुलसीमूलमाश्रिते' तुलसी के मूल की मृत्तिका का ग्रहण है। 'वर्ज्यश्चान्यत्र मृत्तिका' अन्य स्थान की मृत्तिका न लेनी चाहिये। सर्व सुलभ भगवान को अतिप्रिय क्योकि प्रभु अति दयालु स्वभाव के है। इसीलिये कहा कि—

'मूले कृष्णतुलस्या यत्तन्मेऽतीव प्रिय भवेत्।' भगवान विष्णु तुलसी प्रिय है। तुलसी में वैद्युत् शक्ति, स्फुरण एव जीवनी शक्ति विद्यमान है अतएव परम सात्विक वातावरण प्रदान करने वाली है।

ऊर्ध्वपुण्ड्र धारण में श्वेत मृत्तिका स्थान विशेष की ग्राह्य—

स्वेता प्रधानतो ग्राह्या ऊर्ध्वपुण्ड्रस्य धारणे।
सा च स्थानविशेषेण विशेषफलदा भवेत्॥

किस किस प्रकार के फल देने वाली है–कहते है—

श्यामं शान्तिकरं पीतं पुष्टिदा रक्तमृत्तिका।
वश्य श्वेत तथा पुण्य मोक्षदं मुनिसत्तम॥

श्याम मृत्तिका शान्तिप्रद, प्रीत पुष्टिप्रद, रक्तवश्य कारक, श्वेत मोक्ष देने वाली कही है। इन सबकी मीमासा करने पर यही तथ्य निकलता है कि–

सर्वं श्वेत मृदा कार्यमूर्ध्व पुण्ड्रं यथाविधि।
ऋजूनि सान्तरालानि अङ्गेषु द्वादशस्वपि॥

सर्व फल दातृ श्वेतमृत्तिका ही से ऊर्ध्वपुण्ड्र द्वादश स्थानों पर अंगोमें करना श्रीवैष्णवोको आवश्यक है,

दाहिने हाथ के अगुठे के बाद की तर्जनी अंगुली से तिलक धारण करना चाहिये। कहा है–

दक्षिणस्य तु हस्तस्य अङ्गुल्य: सम्यकीर्तित:।
ऊर्ध्वपुण्ड्रस्य करणे निषिद्धा मध्यमाङ्गुलि॥

मध्यम अगुली से तिलक न करे। तर्जनी को प्रदेशिनी भी कहते है क्योकि अंगूठे के समीप होने के कारण इसी से तिलक करने से मुक्ति सिद्धि होती है।

अतएव ऊर्ध्वपुण्ड्र श्रीवैष्णवजन, मुमुक्षजन, वेद वेदान्त के पारंगतजन आदि काल से करते चले आये है और आज भी इसी मार्ग के अवलम्बक साधक भगवद् भक्त करते भी है। घोर संसारी, नास्तिक बुद्धिजन तो तिलक को देखकर घृणा, द्वेष, उपहास तक करने लगते है उनके लिये यह तिलक वह तुला है जिस पर उनका आभिजात्य, सात्विकता आदि गुणों का स्पष्ट संतोलन हो जाता है इसलिये वैष्णवों के द्वारा ऐसे जन सर्वदा उपक्षणीय है।

(अनंत सन्देश की सौजन्य से)

# एक निवेदन

१५ वी शताब्दी के वाग्गेयकार, सप्तगिरीश्वर श्री बालाजी के अनन्य भक्त श्री ताल्लपाक अन्नमाचार्य ने भगवान वेंकटेश्वर के अध्यात्मिक तथा शृंगार पक्षों का करीब ३२,००० कीर्तनों में वर्णन किया। तिरुपति में उन की स्मृति में ति. ति. देवस्थान ने रु. ४.५ लाख खर्च से श्री अन्नमाचार्य कलामदिर का निर्माण किया है। इस भवन का प्रारंभोत्सव २७, दिसबर '७४ को किया गया।

आजकल इस मंदिर में आध्यात्मिक, सांस्कृतिक तथा धार्मिक कार्यक्रम सफलतापूर्वक प्रतिदिन चलते रहते हैं। एक प्रकार यह मदिर धार्मिक जिज्ञासुओं की प्यास बुझता है। हाल ही में हिन्दू धर्म प्रतिष्ठानम् का कार्यालय भी तिरुमल से तिरुपति के इस मदिर में स्थानान्तरित किया गया है। ति. ति. देवस्थान ने श्री अन्नमाचार्य कलामदिर में एक नये ग्रन्थालय का उद्घाटन भी किया है। सभी परोपकार परायण लोगों से नि`दन है कि हिन्दू धर्म तथा भारतीय संस्कृति से सबंधित ग्रन्थ तथा पत्रिकाएँ इस ग्रन्थालय को दान में दे।

आप का यह उदार दान केवल सामाजिक सेवा ही नहीं बल्कि भगवान बालाजी के प्रति के गयी सेवा भी होगी।

—कार्यनिर्वहणाधिकारी, ति ति. देवस्थान, तिरुपति.



ಯಾಕೆನ್ನೊಳಿನಿತು ಕೃಪೆಯಿಲ್ಲ ಹರಿಯೆ || ಪ ||

ಕಾಕು ಮಾಡದೆ ಕಾಯೊ ಭವದೊಳಗೆ ಬಳಲಿದೆನು || ಅಪ ||

ಕಂದರ್ಪ ಬಾಧೆಯಿಂ ಮಾನಿನಿಯ ವಶನಾಗಿ
ಮಂದಮತಿಯಿಂದ ಬಲು ಮರುಳಾದೆನೊ
ಸಂದಿತ್ತೈ ಯವ್ವನವು ಬುದ್ಧಿ ಬಂದಿದೆ ಈಗ
ಸಂದೇಹ ಪದರದೆ ನೀ ಕರುಣಿಸೈ ಎನ್ನ || ೧ ||

ಹೆಂಡತಿಯು ಕಡೆಗಣ್ಣಿನಿಂದ ನೋಡುವಳೀಗ
ಹಿಂದು ಮಕ್ಕಳು ಎನ್ನ ಕಾಡುತಿಹರು
ಮುಂದ ಮೋಚಿದೆ ನಾನು ಇನ್ನಾರು ಗತಿ ಎನಗೆ
ಪುಂಡರೀಕಾಕ್ಷ ನೀ ಕರುಣಿಸೈ ಎನ್ನ || ೨ ||

ಅಟ್ಟ ಮೇಲೆ ಒಲೆ ಉರಿವಂತೆ ಎನಗೀಗ
ಕೆಟ್ಟ ಮೇಲೆ ಅರಿವು ಬಂದಿತಯ್ಯ
ನೆಟ್ಟನೆ ಪುರಂದರ ವಿಠಲನೆ ಕೈಬಿಡದೆ
ದೃಷ್ಟಿಯಿಂದಲಿ ನೋಡಿ ಪರಿಪಾಲಿಸಯ್ಯ || ೩ ||

—ಶ್ರೀ ಪುರಂದರದಾಸರು

JAGADISH

ಸಂದರ್ಶಿಸಿ ಆನಂದಿಸಿ

# ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಹೃಷೀಕೇಶ, ನಾರಾಯಣವನಂ.





# ವಾರ್ಷಿಕ ಬ್ರಹ್ಮೋತ್ಸವಗಳು

**14-5-92 ರಿಂದ 23-5-92**

## <u>ಕಾರ್ಯಕ್ರಮ ವಿವರ</u>

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 14-5-92 | ಗುರುವಾರ | | ಅಂಕುರಾರ್ಪಣೆ |
| 15-5-92 | ಶುಕ್ರವಾರ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 16-5-92 | ಶನಿವಾರ | ಚಿಕ್ಕ ಶೇಷವಾಹನ | ಹಂಸವಾಹನ |
| 17-5-92 | ಭಾನುವಾರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 18-5-92 | ಸೋಮವಾರ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 19-5-92 | ಮಂಗಳವಾರ | ಮೋಹಿನೀ ಅವತಾರ | ಗರುಡವಾಹನ |
| 20-5-92 | ಬುಧವಾರ | ಹನುಮದ್ವಾಹನ<br>ಸಂಜೆ - ವಸಂತೋತ್ಸವ | ಗಜವಾಹನ |
| 21-5-92 | ಗುರುವಾರ, | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 22-5-92 | ಶುಕ್ರವಾರ | ರಥೋತ್ಸವ | ಅಶ್ವವಾಹನ |
| 23-5-92 | ಶನಿವಾರ | ಅವಭೃಥೋತ್ಸವ | ಧ್ವಜಾವರೋಹಣ |

<u>ಸೂಚನೆ</u> ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿರುತ್ತವೆ ನಾರಾಯಣ ವನಂ ತಿರುಪತಿಯಿದ ಪುತ್ತೂರು ಮೂಲಕವಾಗಿ 40 ಕಿ.ಮೀ ದೂರದಲ್ಲಿದೆ ಹೃಷೀಕೇಶ ಉತ್ತರಪ್ರದೇಶದ ಹರಿದ್ವಾರದಿಂದ ಬದರಿ, ಕೇದಾರ, ಗಂಗೋತ್ರಿ, ಯಮುನೋತ್ರಿಗಳಿಗೆ ಹೋಗುವ ಹಾದಿಯಲ್ಲಿ ಹಿಮಾಲಯದ ತಪ್ಪಲಿನಲ್ಲಿ ಹರಿದ್ವಾರದಿಂದ 30 ಕಿ.ಮೀ ದೂರದಲ್ಲಿದೆ ವಿವರಗಳಿಗೆ ಬಳಿಯ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ವಿಚಾರಿಸಿ

**ನೀವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ**




ಗೌರವ ಸಂಪಾದಕರು

ಶ್ರೀ ಎಂ ವಿ ಎಸ್ ಪ್ರಸಾದ್, ಐ ಎ ಎಸ್,

ಕಾರ್ಯನಿರ್ವಹಣಾಧಿಕಾರಿ

ತಿ ತಿ ದೇ , ತಿರುಪತಿ

ಸಂಪಾದಕ

ಕೆ ಸುಬ್ಬಾರಾವು, ಎಂ ಎ

ಉಪಸಂಪಾದಕ

ಬಿ ಎನ್ ಶ್ರೀನಿವಾಸನ್ ಎಂ ಎ,

ಮುದ್ರಣ

ಎಂ ವಿಜಯಕುಮಾರ್‌ರೆಡ್ಡಿ

ಲೇಖನ ಜಾಹೀರಾತುಗಳಿಗೆ

ಮಿಕ್ಕ ವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

**ಬಿಡಿ ಪ್ರತಿ ೧--೦೦**

**ವಾರ್ಷಿಕ ಚಂದಾ ೧೨--೦೦**





**ಸಂಪುಟ ೨೨] ಏಪ್ರಿಲ್ ೧೯೯೨ [ಸಂಚಿಕೆ ೧೧**


# ವಿಷಯಸೂಚಿ



ಮುಖಚಿತ್ರ ಶ್ರೀ ರಾಮಾಂಜನೇಯರು, ಚಿತ್ರ --ಜಗದೀಶ

ಹಿಂಬದಿಯಲ್ಲಿ ಪಂಚಾಂಗ ಪಠಣ -- ಚಿತ್ರ ಮ ಶ್ರೀ

ಒಳಗಡೆ 1 ತಿರುಪತಿ ಶ್ರೀ ಕೋದಂಡರಾಮಸ್ವಾಮಿ ರಥೋತ್ಸವ.

2 ತಿರುಮಲೆಯ ಆಲಯದ ಸೀತಾರಾಮ ಲಕ್ಷ್ಮಣರು.

# ಸಂಪಾದಕೀಯ

ಹೆಸರೇಕೆ ಇಡುತ್ತೇವೆ ಎಂದರೆ ಹಿರಿಮೆಯನ್ನು ಸ್ಥಾಪಿಸಲು, ಪ್ರತ್ಯೇಕತೆಯನ್ನು ಹೇಳುವುದಕ್ಕೆ ಹಾಗಾದರೆ ಹೆಸರಿದ್ದವರೆಲ್ಲ ಹೆಸರಿಗೆ ತಕ್ಕ ಹಿರಿಮೆ ಹೊಂದಿದವರೇನು ಎಂದು ಕೇಳಿದರ ಉತ್ತರಿಸುವುದು ಕಷ್ಟ, ಈ ಸಮಾಜದಲ್ಲಿ ರಾಮನೂ ಇದ್ದಾನೆ ರಾವಣನೂ ಇದ್ದಾನೆ ಸೀತೆಯೂ ಶೂರ್ಪನಖಿಯೂ ಇದ್ದಾರೆ ಆದರೆ ಸಮಾಜಕ್ಕೆ ಆ ಭೇದವಿಲ್ಲ ಮೆಚ್ಚಬೇಕಾದ್ದನ್ನು ಮೆಚ್ಚುತ್ತದೆ ಹೀಗಳೆಯದೇಕಾದನ್ನು ತೆಗಳುತ್ತದೆ ಒಳಿತನ್ನು ಅನುಸರಿಸಿ ಕೆಡುಕನ್ನು ತ್ಯಜಿಸಿ ಎಂದು ಹೇಳುತ್ತದೆ ವ್ಯಕ್ತಿಯ ಒಳ್ಳೆಯ ಪಾರಗಳೇ ಹೊರತು ಕಾಲಕ್ಕೆ ಪಾಪಪುಣ್ಯಗಳ ಗೊಡವೆಯಿಲ್ಲ ಎಂತಲೇ ಅನಂತವಾದ ಕಾಲದಲ್ಲಿ ಅವರವರ ಗುಣಗಳಿಗೆ ತಕ್ಕಂತ ಹೆಸರು ಪ್ರಸಿದ್ಧಿ ದೊರೆಯಿತು ಎಂತಲೇ ಇಂದಿಗೂ ರಾಮನ ಅನಂತಗುಣಗಳನ್ನು ಮೆಚ್ಚುತ್ತಲೇ, ಆತುರವನ್ನ, (ದೈವಾಂಶ, ದೈವೀ ಘಟನೆ ಎನ್ನುವುದರ ಹೊರತು) ಅಸಮಾಧಾನದಿಂದ ನೋಡುತ್ತೇವೆ ಸ್ವಯಂಕೃತಾಪರಾದ ದಲ್ಲಿ ಪ್ರಾಣಕಳೆದುಕೊಂಡ ರಾವಣನನ್ನು ಮೆಚ್ಚುತ್ತಲೇ ಅವನಲ್ಲಿನ ಶಿವಭಕ್ತಿ, ಬಂಧುಪ್ರೇಮ, ವೈದುಷ್ಯಗಳನ್ನು ಮೆಚ್ಚುತ್ತೇವೆ ಎಂದರೆ ಜೀವನ ದ್ವಂದ್ವಗಳ ಸಂಮಿಶ್ರಣವೆನ್ನುವ ಮಾತನ್ನು ಪ್ರತಿ ತಲೆಮಾರೂ ಹೊಸದಾಗಿ ನಿರೂಪಿಸುತ್ತಿದೆ

ಈ ವಿಷಯವನ್ನು ಗುರುತಿಸುತ್ತಲೇ ನಮ್ಮ ಪೂರ್ವಜರು ಕಾಲದ ನದಿಯಲ್ಲಿ ಜಾರಿಹೋಗುವ ಮರಳ ಕಣದಂತಹ ಪ್ರತಿ ವರ್ಷವನ್ನೂ ಹಿಡಿದು ಒಂದು ಚಕ್ರರೂಪವನ್ನು ನೀಡಿ ಚಕ್ರಾರ ಪಂಕ್ತಿಗೆ ಹೆಸರುಗಳನ್ನು ನೀಡಿದರು ಇತರ ದೇಶಗಳಲ್ಲಿ ನಿರಂತರವಾಗಿ ಮುಂದೆ ಸಾಗುವ ಅಂಕಿಗಳ ವತ್ಸರಗಳಾದರೆ ಭಾರತದಲ್ಲಿ ಸುತ್ತು ಸುತ್ತವ ಚಕ್ರವಾಯಿತು ಕಾಲ ಪ್ರಭವ ವಿಭವ ಎಂದು ಎಣಿಸುತ್ತ ಯುಗಳನ್ನೂ ಅದೇ ರೀತಿ ಚಕ್ರ ಸುತ್ತಿನಲ್ಲಿ ಕಾಣುವಂತಾಯಿತು ಇಂತಲ್ಲಿ ನಿಮಿಷ ನಿಮಿಷವೂ ಮುಂದೆ ಸಾಗುವ ಕಾಲದ ಈ ವರ್ಷ ಚಕ್ರದ ಹೆಸರುಗಳನ್ನು ಕಂಡರೆ ಅದು ಒಳಿತು ಕೆಡುಕುಗಳ ಸುಖ ದುಃಖಗಳ ಸಂಕೇತಗಳಂತೆ ಕಾಣುತ್ತದೆ ನಾರದ ಸಂತಾನ, ಅಥವಾ ದಕ್ಷ ಪುತ್ರಿಯರೆಂದು ಹೇಳಿದರೂ ಸಾರೂಪ್ಯ ವಿರುವಂತೆಯೇ ವೈರೂಪ್ಯವೂ ಇದೆ ಒಂದೊಂದೂ ವಿಶಿಷ್ಟವಾದದ್ದೇ ಎನ್ನಬೇಕು ಇಲ್ಲದಿದ್ದಲ್ಲಿ ಕೆಟ್ಟ ಹೆಸರುಗಳನ್ನು ಯಾರೂ ಇಷ್ಟಪಡರು ರುಧಿರೋದ್ಗಾರಿ, ರಕ್ತಾಕ್ಷಿ, ಕ್ರೋಧನ, ಕ್ಷಯ ಎಂಬ ಹೆಸರುಗಳನ್ನಾರು ಕೇಳುತ್ತಾರೆ, ಎಂತಲೇ ಇವೆಲ್ಲಾ ತಂತಾನೇ ವಿಶಿಷ್ಟವಾದ ಹೆಸರುಗಳು ಎನ್ನಬೇಕು

ಇದು ಅಂಗೀರಸ ನಾಮ ಸಂವತ್ಸರ ಈತ ಹೆಚ್ಚು ವೈಶಿಷ್ಟ್ಯಪೂರ್ಣ ವ್ಯಕ್ತಿ ಕರ್ದಮ ದೇವಹೂತಿಗಳ ಜಾಮಾತೃನವಕದಲ್ಲಿ ಈತ ಒಬ್ಬ, ಹಿರಿಯ ತಪಸ್ವಿ, ವಿಶ್ವಾಮಿತ್ರನನ್ನೂ ಸೇರಿಸಿ ಸಪ್ತರ್ಷಿಗಳೆಂದು ನಾವು ಗುರುತಿಸುವವರಲ್ಲದೆ (ಮಾನವ ಮೂಲಪುರುಷರಾದ) ಸಪ್ತರ್ಷಿಗಳು ಅತ್ರಿ, ಅಂಗೀರಸ, ವಶಿಷ್ಠ, ಪುಲಸ್ತ್ಯ ಪುಲಹ, ಕ್ರತು, ಮರೀಚಿ, ದೇವಗುರುವು ಬೃಹಸ್ಪತಿ, ಅಂಗೀರಸನ ಮಗ

ಅಂಗೀರಸನ ಹೆಸರು ಅಥರ್ವಣವೇದದಲ್ಲಿ ಮಂತ್ರದ್ರಷ್ಟಾರ ಎಂದು ಕಂಡುಬರುತ್ತದ

ಅಗ್ನಿ ಒಮ್ಮೆ ತನ್ನ ಕರ್ತವ್ಯದಿಂದ ದೂರಸರಿದಾಗ ಅವನ ಸ್ಥಳದಲ್ಲಿ ಬ್ರಹ್ಮನಿಂದ ನೇಮಕಹೊಂದಿ ನಂತರ ಆತನಿಗ ಅಧಿಕಾರವನ್ನು ಒಪ್ಪಿಸಿದವನು

ಮಹಾದೇವಿಯ ಪರವಾಗಿಯೂ ಅಂಗೀರ ಶಬ್ದ ಕಂಡು ಬರುತ್ತದೆ ಹೀಗೆ ಅಂಗೀರ ಶಬ್ದ ಮಾನವ ಮೂಲಪುರುಷರನ್ನೂ, ಮಹಾದೇವಿಯನ್ನೂ ನೆನಪಿಗೆ ತರುತ್ತದೆ

ಹೀಗೆ ವೈಶಿಷ್ಟ್ಯ ಪೂರ್ಣವಾದ ಪ್ರಸಿದ್ಧಿ ಪಡೆದ ಅಂಗೀರಸ ಸರ್ವರಿಗೂ ಮಂಗಳವನ್ನುಂಟುಮಾಡಲೆಂದು ಬೇಡುವ

*****

# ಶ್ರೀಮದ್ರಾಮಾಯಣದ ಮಹಿಮೆ

ಕಂದಾಡೈ ಕೇಶವನ್

ಭಾರತೀಯ ಜನಜೀವನದಲ್ಲಿ ಶ್ರೀಮದ್ರಾಮಾಯಣದ ಪಾತ್ರ ಎಂದೆಂದಿಗೂ ತನ್ನ ವೈಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿದೆ ರಾಮಾಯಣ ಮಹಾಕಾವ್ಯ ಆದಿಕಾವ್ಯ ಮಹರ್ಷಿ ವಾಲ್ಮೀಕಿಯ ಇಪ್ಪತ್ತುನಾಲ್ಕು ಸಾವಿರದ ಶ್ಲೋಕಗಳ ಈ ಆದಿ ಕಾವ್ಯ ಭಾರತೀಯ ಸಂಸ್ಕೃತಿಯ ದ್ಯೋತಕವಾಗಿ ಸಹಸ್ರಾರು ಜನರಿಗೆ ಮಾರ್ಗದರ್ಶನವನ್ನು ನೀಡುತ್ತಿದೆ ಈ ಕೃತಿ ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಅತ್ಯಂತ ಸರಳವಾದ, ಮನೋಹರವಾದ, ಅರ್ಥ ಗರ್ಭಿತವಾದ, ಎಲ್ಲರ ಹೃದಯಗಳಿಗೆ ಆನಂದ ವನ್ನೀಯುವ ಮಹಾಕಾವ್ಯ ಇದು ನಿತ್ಯನೂತನವಾದುದು ಈ ಸುಂದರ ಕಾವ್ಯವನ್ನು ಓದಿದಷ್ಟು, ಕೇಳಿದಷ್ಟು ಪುನಃ ಕೇಳಬೇಕೆಂಬ, ಓದಬೇಕೆಂಬ, ಹಾಡಬೇಕೆಂಬ ಆಸೆ ಜನರಿಗೆ ಒಡಮೂಡುತ್ತದೆ ಕಾರಣ ಶ್ರೀಮದ್ರಾಮಾಯಣದ ವಸ್ತು ಮರ್ಯಾದಾ ಪುರುಷೋತ್ತಮ ಶ್ರೀರಾಮನ ದಿವ್ಯ ಕಥೆ ಹಾಗೂ ಸೀತಾಮಾತೆಯ ಸುಂದರ ಚರಿತೆ ವಾಲ್ಮೀಕಿ ವಿರಚಿತ ಶ್ರೀಮದ್ರಾಮಾಯಣವನ್ನು ಆದಿಕಾವ್ಯವೆಂದು ಕರೆಯುತ್ತಾರೆ "ಆದಿ ಕಾವ್ಯ ಮಿದಂ ಪ್ರೋಕ್ತಂ ಪುರಾ ವಾಲ್ಮೀಕಿನಾ ಕೃತಂ" ಲೋಕ ಸೃಷ್ಟಿಗೆ ಮೂಲ ಕಾರಣನಾದ ಬ್ರಹ್ಮನಿಂದ ಪ್ರೇರಿತನಾಗಿ ಅವನ ಅನುಗ್ರಹದಿಂದ ರಚಿಸಿದ ಈ ಮಹಾಕಾವ್ಯ ಎಂದೆಂದಿಗೂ ಚಿರನೂತನವಾಗಿ ಇರುವಂತೆ ಆಶೀರ್ವಾದಮಾಡಿದ್ದಾನೆ ಬ್ರಹ್ಮನು ವಾಲ್ಮೀಕಿ ಋಷಿಪುಂಗವರನ್ನು ರಾಮಾಯಣದ ಬಾಲಕಾಂಡದ ಪ್ರಥಮದಲ್ಲಿ ಸಂಬೋಧಿಸುವಾಗ –

"ಮಚ್ಛನ್ದಾ ದೇವ ತೇ ಬ್ರಹ್ಮನ್
ಪ್ರವೃತ್ತೇಯಂ ಸರಸ್ವತೀ
ರಾಮಸ್ಯ ಚರಿತಂ ಕೃತ್ಸ್ನಂ
ಕುರು ತ್ವಂ ಋಷಿ ಸತ್ತಮ"

ಧರ್ಮಾತ್ಮನೋ ಗುಣವತೋ
ಲೋಕೇ ರಾಮಸ್ಯ ಧೀಮತಃ
ವೃತ್ತಂ ಕಥಯ ವೀರಸ್ಯ
ಯಥಾ ತೇ ನಾರದಾಚ್ಛ್ರುತಂ
ರಹಸ್ಯಂ ಚ ಪ್ರಕಾಶಂ ಚ
ಯದ್ವೃತ್ತಂ ತಸ್ಯ ಧೀಮತಃ

ಶ್ರೀರಾಮನ ಚರಿತೆಯನ್ನು ನೀನು ಸಂಪೂರ್ಣವಾಗಿ ರಚಿಸು ಆತನು ಧರ್ಮಾತ್ಮನು, ಗುಣಶಾಲಿ, ಮಹಾ ಪ್ರಾಜ್ಞ, ಧೀರ ಹಾಗೂ ಶೂರ, ನಾರದರು ಹಿಂದೆ ನಿನಗೆ ತಿಳಿಸಿದಂತೆ ಶ್ರೀರಾಮಚರಿತ್ರೆಯನ್ನು ವರ್ಣಿಸು –ಎಂಬುವುದಾಗಿ ಬ್ರಹ್ಮನು ರಾಮಾಯಣವನ್ನು ವಿರಚಿಸುವಂತೆ ವಾಲ್ಮೀಕಿ ಮಹರ್ಷಿಗಳಿಗೆ ಸೂಚಿಸುತ್ತಾನೆ ವಾಲ್ಮೀಕಿ ಮಹರ್ಷಿಗಳಾದರೋ "ತಪಃ ಸ್ವಾಧ್ಯಾಯ ನಿರತಂ, ತಪಸ್ವೀ ವಾಗ್ವಿದಾಂ ವರಂ" (ತಪಸ್ಸನ್ನೇ ಜೀವನವನ್ನಾಗಿ ಉಳ್ಳವ, ತಪಸ್ಸು ಹಾಗೂ ವೇದಾಧ್ಯಯನದಲ್ಲಿ ನಿರತರು, ನಿರಂತರ ಸರಸ್ವತೀ ಉಪಾಸಕರು ಬ್ರಹ್ಮಜ್ಞಾನಿ ಸದಾಚಾರ ಸಂಪನ್ನನಾದ ತಪೋಧನರು ಇಂತಹವರಿಗೆ ತ್ರೈಲೋಕ್ಯ ಪೂಜರಾದ ಭಕ್ತಶಿರೋಮಣಿ ನಾರದರು ವಿಶದವಾಗಿ ರಾಮಾಯಣ ಕತೆಯನ್ನು ಹೇಳಿ, ಅದರ ಮಹಿಮೆಯನ್ನು ವರ್ಣಿಸುವಾಗ "ಇದಂ ಪವಿತ್ರಂ ಪಾಪಘ್ನಂ ಪುಣ್ಯಂ ವೇದೈಶ್ಚ ಸಂಮಿತಂ ಯಃ ಪಠೇತ್ ರಾಮಚರಿತಂ ಸರ್ವ ಪಾಪೈಃ ಪ್ರಮುಚ್ಯತೇ" – ಈ ರಾಮಾಯಣವು ಪವಿತ್ರವಾದುದು ಪ್ರತಿನಿತ್ಯವೂ ಇದನ್ನು ಪಠಿಸುವುದರಿಂದ ಪಾಪಪರಿಹಾರವಾಗುತ್ತೆ, ಪುಣ್ಯಸಾಧನವೂ ಹೌದು ಇದು ವೇದಕ್ಕೆ ಸಮಾನವಾದುದು ಯಾರು ರಾಮಾಯಣ ಚರಿತೆಯನ್ನು ಪಠನಮಾಡುವರೋ ಅವರು ಸರ್ವಪಾಪಗಳಿಂದ ವಿಮುಕ್ತರಾಗುತ್ತಾರೆ –ಎಂಬುವುದಾಗಿ ಹೇಳಿದ್ದಾರೆ ವಾಲ್ಮೀಕಿ ಮುನಿಗಳು ನಾರದರಿಂದ ಶ್ರೀರಾಮಚರಿತ್ರವನ್ನು ಸಮಗ್ರವಾಗಿ ಕೇಳಿದ ಮೇಲೆ ದರ್ಭೆಯ ಆಸನದಲ್ಲಿ ಕುಳಿತು ಧ್ಯಾನಾಸಕ್ತರಾದಾಗ ಅವರ ಜ್ಞಾನ ದೃಷ್ಟಿಗೆ ಶ್ರೀರಾಮನ ಸಂಪೂರ್ಣ ಚರಿತೆ ವಿಶದವಾಗಿ ಗೋಚರಿಸಲಾಗಿ 24,000 ಶ್ಲೋಕಗಳುಳ್ಳ



ಶ್ರೀಮದ್ರಾಮಾಯಣವನ್ನು ಸಂಸ್ಕೃತದಲ್ಲಿ ರಚಿಸಿದರು ಈ ಶ್ಲೋಕಗಳಾದರೋ ದೋಷರಹಿತವಾದ ವರ್ಣವಿನ್ಯಾಸದಿಂದ ಕೂಡಿವೆ ಇವು ರಸಭಾವಗಳಿಗೆ ಅನುರೂಪವಾದ ಶಬ್ದಾರ್ಥಗಳಿಂದ ಕೂಡಿ ಮನೋಹರವಾಗಿವೆ ವ್ಯಾಕರಣ ಮರ್ಯಾದೆಯನ್ನನುಸರಿಸಿ ಸಂಧಿ ಸಮಾಸಗಳ ಸಂಘಟನೆಗಳಿಂದ ಎಲ್ಲಾ ಕಾವ್ಯ ಗುಣಗಳಿಂದ ನವರಸಗಳಿಂದ ಕೂಡಿವೆ ಬ್ರಹ್ಮನು ವಾಲ್ಮೀಕಿಮುನಿಗಳಿಗೆ ರಾಮಾಯಣವನ್ನು ರಚಿಸುವಂತೆ ಆದೇಶ ಮಾಡಿದಾಗ ಹೇಳಿದ ಈ ಫಲಶ್ರುತಿ ಸತ್ಯವಾಗಿ ಎಂದೆಂದಿಗೂ ನಿಜವಾಗಿ ಉಳಿದಿದೆ

"ಯಾವತ್ ಸ್ಥಾಸ್ಯನ್ತಿ ಗಿರಯಃ
ಸರಿತಶ್ಚ ಮಹೀತಲೇ
ತಾವದ್ರಾಮಾಯಣ ಕಥಾ
ಲೋಕೇಷು ಪ್ರಚರಿಷ್ಯತಿ"

-ಈ ಪೃಥ್ವಿಯಲ್ಲಿ ಎಂದಿನವರೆಗೆ ಗಿರಿ ನದಿಗಳು ಇರುತ್ತವೋ ಅಂದಿನವರೆಗೂ ನೀನು ರಚಿಸುವ ರಾಮಾಯಣ ಕಥೆಯು ಎಲ್ಲಾ ಲೋಕಗಳಲ್ಲಿ ಪ್ರಚಾರದಲ್ಲಿರುತ್ತವೆ ರಾಮಾಯಣ ಮಹಾಕಾವ್ಯ ಅನೇಕ ತತ್ವಗಳಿಂದ ಕೂಡಿ, ಕಿವಿಗಿಂಪಾದ ಶಬ್ದಮಾಧುರ್ಯದಿಂದ, ಪ್ರೌಢವಾದ ವರ್ಣನೆಗಳಿಂದ, ಸಹಜ ಪ್ರಕೃತಿ ಸೌಂದರ್ಯದ ವರ್ಣನೆಗಳಿಂದ, ನಮ್ಮೆಲ್ಲರ ಅನುಭವಕ್ಕೆ ವೇದ್ಯವಾಗಿ ಮನಸ್ಸಿಗೆ ತಂಪನ್ನು ಕೊಡುವ ತತ್ವ ಹಿತಾರ್ಥಗಳಿಂದ ನವರಸಗಳಿಂದ ಕೂಡಿದ ಕಥನದ ಕೌಶಲತೆ ನಮ್ಮನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ ರಾಮಾಯಣದಲ್ಲಿ ಇರುವ ರಸದ ಊಟೆ ನಾವು ಮತ್ತೆಲ್ಲಿಯೂ ಕಾಣಲಾರೆವು ಆದ್ದರಿಂದಲೇ ನಾವು ರಾಮಾಯಣದ ಪಾರಾಯಣವನ್ನು ಮಾಡುವಾಗ ವಾಲ್ಮೀಕಿ ಮುನಿಪುಂಗವರನ್ನು ಸ್ಮರಿಸುವಾಗ—

"ಕೂಜನ್ತಂ ರಾಮರಾಮೇತಿ
ಮಧುರಂ ಮಧುರಾಕ್ಷರಂ
ಆರುಹ್ಯ ಕವಿತಾಶಾಖಾಂ
ವಂದೇ ವಾಲ್ಮೀಕಿ ಕೋಕಿಲಂ"

ಕವಿತೆಯ ಶಿಖರದ ಶಾಖೆಯನ್ನೇರಿ ಮಧುರತಮವಾದ ರಾಮರಾಮ ಎಂದು ಪಂಚಮ ಶ್ರುತಿಯಲ್ಲಿ ಹಾಡುತ್ತಿರುವ ಈ ವಾಲ್ಮೀಕಿ ಕೋಗಿಲೆಯನ್ನು ನಮಸ್ಕರಿಸುತ್ತೇನೆ -ಎಂಬುವುದಾಗಿ ವರನಮಾಡುವುದು ಈ ಆದಿಕಾವ್ಯದ ಅಮರತೆಯನ್ನು ಎತ್ತಿ ತೋರಿಸುತ್ತದೆ ಈ ಆದಿಕಾವ್ಯ ಮುಂಬರುವ ಎಲ್ಲಾ ಕವಿಗಳಿಗೆ ಸ್ಫೂರ್ತಿಯನ್ನು ನೀಡಿದೆ ಭಾರತ ದೇಶದ ಎಲ್ಲಾ ಭಾಷೆಗಳ ಉತ್ತಮ ಕವಿಗಳು ವಾಲ್ಮೀಕಿ ಮಹರ್ಷಿಯಿಂದ ಸ್ಫೂರ್ತಿ ಪಡೆದು ಆ ರಾಮಕಥಾಸಾಗರದಲ್ಲಿ ತಮಗೆ ಶಕ್ತಿ ಇರುವಷ್ಟು ರಾಮಾಯಣದ ರಸವಾಹಿನಿಯನ್ನು ಬಾಚಿಕೊಂಡು ಸಂತೃಪ್ತರಾಗಿದ್ದಾರೆ ಸಂಸ್ಕೃತದಲ್ಲಿಯೇ ಅದ್ಭುತ ರಾಮಾಯಣ, ಆಧ್ಯಾತ್ಮರಾಮಾಯಣ, ವಾಸಿಷ್ಠ ರಾಮಾಯಣ, ಅಗಸ್ತ್ಯರಾಮಾಯಣ, ಆನಂದರಾಮಾಯಣ ಮುಂತಾದುವುಗಳು ರಚನೆಯಾದವು ಸಂಸ್ಕೃತದಲ್ಲಿ ಕಾಳಿದಾಸನ ರಘುವಂಶ ಕಾವ್ಯ, ಭಾಸನ ಪ್ರತಿಮಾ ನಾಟಕ, ಭವಭೂತಿಯ ಉತ್ತರ ರಾಮಚರಿತೆ, ಮುರಾರಿಯ ಅನರ್ಘರಾಘವನಾಟಕ, ಭೋಜನ ಚಂಪೂರಾಮಾಯಣ, ರಾಮಾಯಣದ ಬಗ್ಗೆ ಬರೆದ ವಿಶ್ವವಂದನೀಯ ಕೃತಿಗಳು ತೆಲುಗು ರಂಗನಾಥ ರಾಮಾಯಣ, ತಮಿಳಿನಲ್ಲಿ ಕಂಬರಾಮಾಯಣ, ಹಿಂದಿಯಲ್ಲಿ ತುಲಸೀದಾಸರ ರಾಮಾಯಣ, ಮಹಾಮೇರು ಕೃತಿಗಳು ಬಂಗಾಳಿಯಲ್ಲಿ ಕೃತ್ತಿವಾಸನ ರಾಮಾಯಣ, ಮಹಾರಾಷ್ಟ್ರದಲ್ಲಿ ಪ್ರಚಾರದಲ್ಲಿರುವ ಶ್ರೀಧರನ ರಾಮಾಯಣ ಪ್ರಸಿದ್ಧವಾಗಿವೆ ಕನ್ನಡದಲ್ಲಿ ನರಹರಿಯ ತೊರವೆ ರಾಮಾಯಣ, ಪಂಪರಾಮಾಯಣ, ಬೇಕಲ ರಾಮನಾಯಕರ ಸಾಂಗತ್ಯ ಶೈಲಿಯಲ್ಲಿ ಬರೆದ ವಾಸಿಷ್ಠರಾಮಾಯಣ ಕುವೆಂಪುರವರ ಶ್ರೀರಾಮಾಯಣದರ್ಶನಂ, ಲಕ್ಷ್ಮೀಶನ ಜೈಮಿನಿ ಭಾರತದಲ್ಲಿನ ರಾಮಾಯಣದ ಭಾಗ, ಆಸೂರಿ ರಾಮಸ್ವಾಮ್ಯಯ್ಯಂಗಾರ್‌ರವರ ಭರತ ಭಕ್ತಿಕಾವ್ಯ, ಮಾಸ್ತಿ ವೆಂಕಟೇಶಯ್ಯಂಗಾರರ ಆದಿ ಕವಿ ವಾಲ್ಮೀಕಿ - ರಾಮಾಯಣದ ಹಿರಿಮೆಯನ್ನು ತೋರಿಸುತ್ತವೆ

ಆಧ್ಯಾತ್ಮ ರಾಮಾಯಣದ ಉತ್ತರಕಾಂಡದಲ್ಲಿ ಫಲಶ್ರುತಿಯನ್ನು ಹೇಳುವಾಗ

"ಆಧ್ಯಾತ್ಮರಾಮಂ ಪಠತಶ್ಚ ನಿತ್ಯಂ
ಶ್ರೋತುಶ್ಚ ಭಕ್ತ್ಯಾ ಲಿಖಿತುಶ್ಚ ರಾಮಃ
ಅತಿ ಪ್ರಸನ್ನಶ್ಚ ಸದಾ ಸಮೀಪೆ
ಸೀತಾ ಸಮೇತಃ ಶ್ರಿಯಮಾತನೋತಿ"

ಈ ಅಧ್ಯಾತ್ಮ ರಾಮಾಯಣವನ್ನು ಪ್ರತಿನಿತ್ಯ ಪಠನಮಾಡಿದರೂ, ಕೇಳಿದರೂ ಭಕ್ತಿಯಿಂದ ಬರೆದರೂ ಸೀತಾ ಸಮೇತನಾದ ಶ್ರೀರಾಮ ಅವರ ಸಮೀಪದಲ್ಲಿ ಇದ್ದು ಅವರಿಗೆ ನಿತ್ಯ ಶ್ರೇಯಸ್ಸನ್ನು ದಯಪಾಲಿಸುತ್ತಾನೆ ಎಂಬುವುದಾಗಿ ಋಷಿ ಹೇಳಿದ್ದಾರೆ

ಆನಂದ ರಾಮಾಯಣದ ಫಲಶ್ರುತಿಯಲ್ಲಿ ಋಷಿಪುಂಗವರು ಫಲಶ್ರುತಿಯನ್ನು ಹೇಳುವಾಗ

"ರಮ್ಯಂ ಪವಿತ್ರಂ ಆನಂದ
ದಾಯಕಂ ಚ ಮನೋಹರಂ
ಆನಂದ ಸಂಜ್ಞಕಂ ರಾಮ
ಚರಿತಂ ಪುಣ್ಯ ವರ್ಧನಂ
ರಾಮಾಯಣಮಿದಂ ಯೇऽತ್ರ
ಭಕ್ತ್ಯಾ ಶೃಣ್ವಂತಿ ಮಾನವಾಃ
ತೇಷಾಂ ಸ್ತ್ರೀಭಿಃ ವಿಯೋಗೋऽತ್ರ
ನ ಕದಾಪಿ ಹಿ ಜಾಯತೇ"

ಈ ಆನಂದ ರಾಮಾಯಣವು ಪವಿತ್ರವಾದದು ರಮ್ಯವಾದದು ಮನೋಹರವೂ ಹಾಗೂ ಆನಂದವನ್ನೀಯುವಂತಹದು ಇಂತಹ ರಾಮ ಚರಿತೆಯು ಪುಣ್ಯಪ್ರದವಾದುದು ಯಾವ ಮಾನವರು ಇದನ್ನು ಭಕ್ತಿಯಿಂದ ಕೇಳುತ್ತಾರೋ ಅವರು ಪತ್ನೀ ಬಾಂಧವರಿಂದ ವಿಯೋಗವನ್ನು ಹೊಂದುವುದಿಲ್ಲ

ಈಶ್ವರನು ಪಾರ್ವತಿಗೆ ಶ್ರೀರಾಮನ ಮಹಿಮೆಯನ್ನು ಹೇಳುವಾಗ ಶ್ರೀರಾಮ ಶ್ರೀರಾಮ ಎಂದು ಭಕ್ತಿಯಿಂದ ಜಪಿಸುವುಕ್ಕಿಂತ ಬೇರೆ ಯಾವ ಸಹಸ್ರನಾಮವನ್ನು ಉಚ್ಚರಿಸಿದರೂ ಶ್ರೀರಾಮ ನಾಮಕ್ಕೆ ಸಮಾನವಾದ ತಾರಕನಾಮ ಮತ್ತೊಂದಿಲ್ಲ ಎಂಬುವುದಾಗಿ ಉಪದೇಶ ಮಾಡಿದ್ದಾನೆ ಶ್ರೀರಾಮಚಂದ್ರ ಮೂರ್ತಿಯು ಲೋಕ ಕಂಟಕನಾದ ರಾವಣವದಾರ್ಥವಾಗಿ ಹುಟ್ಟಿದ್ದು ಧರ್ಮ ಉದ್ಧಾರಕ್ಕಾಗಿ, ಲೋಕದಲ್ಲಿ ತಾನು ತೋರಿಸಿದ ಮಾನುಷಲೀಲೆಗಳು, ರಾಜಧರ್ಮ, ಪ್ರಜಾಧರ್ಮ, ಪತಿಧರ್ಮ, ಭಾತೃಧರ್ಮ, ಪಿತೃಧರ್ಮಗಳನ್ನು ಜನರಿಗೆ ಅನುಷ್ಠಾನ ಮಾಡಲು ಉದ್ದೇಶದಿಂದ ಮಾತ್ರ ರಾಮಾಯಣದಲ್ಲಿ ನವರಸಗಳನ್ನು ಈ ಕೆಳಗಿನ ಸಂದರ್ಭಗಳಲ್ಲಿ ನಾವು ಕಾಣಬಹುದು

"ಶೃಂಗಾರಂ ಕ್ಷಿತಿ ನಂದಿನೀ ವಿಹರಣೇ
ವೀರಂ ಧನುರ್ಭಂಜನೇ
ಕಾರುಣ್ಯಂ ಬಲಿಭೋಜನೇ
ಅದ್ಭುತರಸಂ ಸಿಂಧೌ ಗಿರಿಸ್ಥಾಪನೇ
ಹಾಸ್ಯಂ ಶೂರ್ಪಣಖಾಮುಖೇ
ಭಯವಹೇ ಬೀಭತ್ಸ ಮನ್ಯಾಮುಖೇ
ರೌದ್ರಂ ರಾವಣ ಮರ್ದನೇ
ಮುನಿಜನೇ ಶಾಂತಂ ವಪುಃ ಪಾತುನಃ

ಶ್ರೀರಾಮನು ಸೀತೆಯೊಡನೆ ವಿಹಾರಮಾಡುವಾಗ ಶೃಂಗಾರ ರಸವನ್ನೂ, ಶಿವಧನಸ್ಸನ್ನು ಮುರಿಯುವಾಗ ವೀರರಸವನ್ನೂ, ಕಾಕಾಸುರನನ್ನು ಶಿಕ್ಷಿಸುವಾಗ ಕರುಣರಸವನ್ನೂ, ಸಮುದ್ರದಲ್ಲಿ ಸೇತುವೆ ನಿರ್ಮಾಣಮಾಡುವಾಗ ಅದ್ಭುತ ರಸವನ್ನೂ, ಶೂರ್ಪಣಖಿಯ ಮುಖಭಂಗ ಮಾಡುವಾಗ ಹಾಸ್ಯರಸವನ್ನೂ, ಬೀಭತ್ಸರಸವನ್ನು ಬೇರೆ ಸಮಯದಲ್ಲೂ ರಾವಣ ಸಂಹಾರ ಮಾಡುವಾಗ ರೌದ್ರರಸವನ್ನೂ, ಮುನಿಜನರ ಪ್ರೀತಿ ತೋರುವಾಗ ಶಾಂತರಸವನ್ನೂ ನಾವು ರಾಮಾಯಣದಲ್ಲಿ ಕಾಣಬಹುದು ಜೈಮಿನಿ ಭಾರತದಲ್ಲಿ ಶ್ರೀರಾಮನು ಲವ ಕುಶರಿಂದ ಪರಾಜಿತರಾಗಿ ನತ್ತು ಬಿದ್ದಿರುವ ಸೈನ್ಯವನ್ನೂ ಮೂರ್ಛಾಕ್ರಾಂತರಾಗಿ ಬಿದ್ದಿರುವ ತಮ್ಮಂದಿರನ್ನು ಕಂಡು ಲವ ಕುಶರನ್ನು ಕುರಿತು 'ಎಲೈ ಬಾಲಕರೇ ಅಜೇಯರಾದ ಲಕ್ಷ್ಮಣ ಶತ್ರುಘ್ನರನ್ನು ಗೆಲ್ಲುವ ಶಕ್ತಿಯು ನಿಮಗೆ ಹೇಗೆ ಬಂದಿತು' ಎಂಬುವುದಾಗಿ ಕೇಳಿದಾಗ ಕುಶನು ರಾಮನಿಗೆ ಪ್ರತ್ಯುತ್ತರವನ್ನು ಹೇಳುವಾಗ–

"ರಾಮ ಚಾರಿತ್ರ್ಯ ಪರನಾಭ್ಯಾಸ ಯೋಗದಿಂ
ಕ್ಷೇಮಂ ಸುಪುಷ್ಟಿ ನಿಶ್ಚಲಮತಿ ನಿರಾಲಸ್ಯ
ಮಿಾ ಮಹಾ ಸೈನ್ಯವಂ ಗೆಲ್ಪದಟು
ತಮಗಾದುದೆಂದು ಕುಶನುಸಿರೆ ಕೇಳ್ದು"

ಎಂಬುವ ಭಾಗದಲ್ಲಿ ರಾಮಾಯಣವನ್ನು ತಪ್ಪದೆ ಪಾರಾಯಣ ಮಾಡುತ್ತಿರುವ ಅಭ್ಯಾಸದ ಫಲವು ನಮಗೆ ಕ್ಷೇಮವೂ, ಆರೋಗ್ಯವೂ, ಕಾಯಪುಷ್ಠಿಯೂ, ಸ್ಥಿರಮನಸ್ಸು, ಚಟುವಟಿಕೆ ಹಾಗೂ ಈಮ್ಮ ಮಹಾಸೈನ್ಯವನ್ನು ಗೆಲ್ಲುವ ಸಾಧ್ಯತೆ ಆಯಿತು ಎಂಬುವುದಾಗಿ ಕುಶನು ರಾಮನಿಗೆ ಉತ್ತರ ಕೊಟ್ಟಿರುತ್ತಾನೆ

ಕನ್ನಡದಲ್ಲಿ ಕುಮಾರ ವಾಲ್ಮೀಕಿ ಬರೆದ ರಾಮಾಯಣ, ಮುದ್ದಣನ ಶ್ರೀ ರಾಮಾಶ್ವಮೇಧವೂ ಉತ್ತಮ ಕೃತಿಗಳಾಗಿ ನಿಂತಿವೆ ವಾಲ್ಮೀಕಿ ಕಾಲದಿಂದ ಇಂದಿನವರೆಗೂ ಅಸಂಖ್ಯಾತ ಕವಿಗಳು ರಾಮಾಯಣವನ್ನು ವಸ್ತುವನ್ನಾಗಿ ಆರಿಸಿಕೊಂಡು ತಮ್ಮ ಪ್ರತಿಭೆಯ ಫಲದಿಂದ ರಾಮನ ಮಹಿಮೆಗೆ ಅನೇಕ ಪುಷ್ಪಹಾರಗಳನ್ನು ಸಮರ್ಪಿಸಿದ್ದಾರೆ ವೇದ ಉಪನಿಷತ್‌ಗಳಲ್ಲಿ ಸಿಗದ ಆನಂದ ನಮಗೆ ರಾಮಾಯಣದಲ್ಲಿ ಸಿಗುತ್ತದೆ ಕಾರಣ ಶ್ರೀರಾಮನ ದಿವ್ಯದರ್ಶನ ಅವನ ಆದರ್ಶ ಜೀವನ ತತ್ವ, ಫಲಸಿದ್ಧಿ ಆನಂದದ ಪರಮಸೋಪಾನ - ರಾಮ ಕಥೆಯನ್ನು ಕೇಳುವುದರಲ್ಲಿ ಅವನ ನಾಮ ಜಪದಲ್ಲಿ ನಮಗೆ ಸಿಗುತ್ತದೆ ಶ್ರೀರಾಮನ ಕಲ್ಯಾಣಗುಣಗಳನ್ನು ಕೊಂಡಾಡುವಾಗ ಅವನ ಭಗವತ್ ಸ್ವರೂಪದ ಮಹಿಮೆಯನ್ನು ವಿವರಿಸುವಾಗ ರಾಮ ತತ್ವವನ್ನು ಹನುಮಂತ ಬಲ್ಲ ರಾಮನಾಮದ ಸವಿ ಶಿವನೊಬ್ಬ ಬಲ್ಲ ಗೌತಮ ಸತಿ ಅಹಲ್ಯೆ ರಾಮನ ಚರಣ ಪ್ರಭಾವವನ್ನು ಬಲ್ಲಳು ಎಂಬುವುದಾಗಿ ಹೇಳುತ್ತಾರೆ ಶ್ರೀರಾಮನ ಉದಾತ್ತಗುಣಗಳನ್ನು ಭಕ್ತಿಯಿಂದ ಅನುಸಂಧಾನಮಾಡಿದರೆ ಅದಕ್ಕಿಂತ ಮತ್ತೊಂದು ಮಹಾಭಾಗ್ಯವಿಲ್ಲ ಶ್ರೀರಾಮನ ಬಗ್ಗೆ ಶ್ರೀ ತುಲಸೀದಾಸರು ಅವನು ಮಂಗಳಪ್ರದನು ರಾಮಭದ್ರನು ಅಮಂಗಳಹಾರಿ, ಸಚ್ಚಿದಾನಂದಮೂರ್ತಿ ಸ್ವಯಂಪ್ರಕಾಶಿ, ಜ್ಞಾನಿ, ಅವಿನಾಶಿ, ಅವನು ನಿರ್ಗುಣನೂ ಹೌದು ಸಾಕಾರಮೂರ್ತಿಯು ಹೌದು ಎಂಬುವುದಾಗಿ–

"ಸಗುನಹಿ ಅಗುನಹಿ ನಹಿಂ ಕಛು ಭೇದಾ
ಗಾವಹಿ ಮುನಿ ಪುರಾನ ಬುಧ ವೇದಾ
ಅಗುನ ಅರೂಪ ಅಲಖ ಅಜ ಜೋ ಈ
ಭಗತ ಪ್ರೇಮ ಬಸ ಸಗುನ ಸೋ ಹೋ ಈ"

–ಹೇಳಿದ್ದಾರ

ಶ್ರೀರಾಮನ ಅವತಾರ ರಹಸ್ಯವನ್ನು ವಿವರಿಸುತ್ತಾ ತುಲಸೀದಾಸರು ಹರಿಯ ಲೀಲಾ ವಿಶೇಷಗಳನ್ನು ವರ್ಣಿಸಲು ಸಾಧ್ಯವಿಲ್ಲ ಅವು ಅಸಂಖ್ಯಾತವಾದವು, ನಿರವಧಿಕ, ಹೀಗೆಂದು ಸಂಪೂರ್ಣವಾಗಿ ವರ್ಣಿಸಲು ವೇದ ಇತಿಹಾಸ ಪುರಾಣಗಳಿಗೂ ಸಾಧ್ಯವಾಗಿಲ್ಲ ಎಂಬುದಾಗಿ–

"ಹರಿಗುನ ನಾಮ ಅಪಾರ
ಕಥಾರೂಪ ಅಗನಿತ ಅಮಿತ
ಮೈ ನಿಜಮತಿ ಅನುಸಾರ
ಕಹಲುಂ ಉಮಾ ಸಾದರ ಸುನಹು
ಹರಿ ಅವತಾರ ಹೇತು ಜೆಹಿ ಹೋ ಈ
ಇದಮಿತ್ಥಂ ಕಹಿ ಜಾ ಇ ನ ಸೋಹಿ
ತಪದಿ ಸಂತ ಮುನಿವೇದ ಪುರಾನಾ
ಜಸ ಕಛು ಕಹಹಿಂ ಸ್ವಮತಿ ಅನುಮಾನಾ"

–ಹೇಳಿದ್ದಾರೆ

ಸೃಷ್ಟಿಯ ಆದಿಯಲ್ಲಿ ಭಗವಂತನು ಸನಾತನ ಧರ್ಮವನ್ನು ಮರೀಚಿ ಮೊದಲಾದ ಮಹರ್ಷಿಗಳಿಗೆ ಉಪದೇಶ ಮಾಡಿದನು ರಾಮಾವತಾರದಲ್ಲಿ ಸ್ವತಃ ತಾನೇ ಆ ಸನಾತನ ಧರ್ಮವನ್ನು ಅನುಷ್ಠಾನವನ್ನು ಮಾಡಿ ತೋರಿಸುತ್ತಾನೆ ಶ್ರೀರಾಮನು ಧರ್ಮದ ಮೂರ್ತಿ

"ವೇದವೇದ್ಯೇ ಪರೇ ಪುಂಸಿ
ಜಾತೇ ದಶರಥಾತ್ಮಜೇ
ವೇದಃ ಪ್ರಾಚೇತಸಾದಾಸೀತ್
ಸಾಕ್ಷಾತ್ ರಾಮಾಯಣಾತ್ಮನಾ"

ವೇದ ವೇದ್ಯನಾದ ಪರಮ ಪುರುಷ ಶ್ರೀಹರಿ ಭಗವಂತನು ದಶರಥ ಪುತ್ರನಾಗಿ ಜನಿಸಿದಾಗ ವೇದವೂ ಶ್ರೀ ವಾಲ್ಮೀಕಿ ಋಷಿಯ ಮುಖದಿಂದ ಶ್ರೀ ರಾಮಾಯಣರೂಪವಾಗಿ ಆವಿರ್ಭವಿಸಿತು

ರಾಮನಾಮದ ಮಹಿಮೆ ಹೇಳುವಾಗ "ರಾಶಬ್ದೋಚ್ಚರಣಾದೇವ ಮುಖಾನ್ನಿರ್ಯಾಂತಿ ಪಾತಕಾಃ ಪುನಃ ಪ್ರವೇಶ ಭೀತಿಶ್ಚೇನ್ಮಕಾರಸ್ತು ಕವಾಟವತ್" 'ರಾ' ಶಬ್ದೋಚ್ಚಾರಣದಿಂದ ಜನ್ಮಜನ್ಮಾಂತರಗಳಲ್ಲಿ ಸಂಚಿತ ಪಾಪಗಳು ಮುಖದಿಂದ ಹೊರಗೆ ಬರುತ್ತವೆ ತರುವಾಯ 'ಮ' ಎಂಬ ಅಕ್ಷರದ ಪಠನದಿಂದ ಈಚೆಗೆ ಬಂದ ಪಾಪರಾಶಿಯು ಪುನಃ ಬಳಗೆ ಹೋಗದಂತೆ ಬಾಯಿಗೆ ಮಕಾರವು ಬಾಗಿಲು ಮುಚ್ಚಿ ಪ್ರತಿ ಬಂಧಕವನ್ನು ತರುತ್ತದೆ ಇದು ಹರ ನಾರಾಯಣರ ಮಂತ್ರಗಳ ಮುಖ್ಯಾರ್ಥ ಪ್ರತಿಪಾದಕವೂ ಆಗಿರುತ್ತದೆ "ಓಂ ನಮೋ ನಾರಾಯಣಾಯ" ಎಂಬ ಅಷ್ಟಾಕ್ಷರೀ ಮಂತ್ರದಲ್ಲಿರುವ "ರಾ" ಎಂಬ ಅಕ್ಷರವೂ "ಓಂ ನಮಃ ಶಿವಾಯ" ಎಂಬ ಪಂಚಾಕ್ಷರದಲ್ಲಿರುವ "ಮ" ಎಂಬ ಅಕ್ಷರವೂ ಕೂಡಿ ರಾಮನಾಮವಾಗಿದೆ

ವೇದವು ಅಪೌರುಷೇಯ, ಭಗವದ್ವಾಣಿಯು, ಆದ್ದರಿಂದ ವೇದದಲ್ಲಿ ಅವತಾರವಿಶೇಷಕವಾದ ಬೀಜವು ಪ್ರಥಮತಃ ಋಗ್ವೇದದಲ್ಲಿ (10-3-3) ಸಾಮವೇದದಲ್ಲಿ (1548) ಕಂಡುಬರುತ್ತವೆ

"ಭದ್ರೋ ಭದ್ರಯಾ ಸಚಮಾನಃ
ಆಗಾತ್ ಸ್ವಸಾರಂ ಜಾರೋ
ಅಭ್ಯೇತಿ ಪಶ್ಚಾತ್ ಸುಪ್ರಕೇತೈ
ರ್ದ್ಯುಭಿರಗ್ನಿರ್ವಿತಿಷ್ಠನ್‌ರುಶ
ದ್ಭಿರ್ವರ್ಣೈಃ ಅಭಿರಾಮ ಅಸ್ಥಾತ್"

ಶ್ರೀರಾಮನು ರಾಮಭದ್ರನು ರಾಮಭದ್ರಃ ಪದದಿಂದ ಭದ್ರಃ, ರಾಮಃ ಪ್ರಯೋಗಗಳು ಪೂರ್ವಪದವೋ ಅಥವಾ ಉತ್ತರಪದವೋ ಲೋಪವಾಗುವುದರಿಂದ ಮೇಲಿನ ಮಂತ್ರದಲ್ಲಿ ಪೂರ್ವಪದವಾದ ರಾಮಶಬ್ದದ ಲೋಪದಿಂದ "ಭದ್ರಃ" ಎಂಬುದು ಮಾತ್ರ ನಿಲ್ಲುತ್ತದೆ ಮೇಲಿನ ಮಂತ್ರಕ್ಕೆ ಅರ್ಥ ವಿವರಣೆಯು "ಭದ್ರಃ" ಭಜನೀಯಃ ರಾಮಭದ್ರಃ - ಶ್ರೀರಾಮಃ ಭದ್ರಯಾ=ಭಜನಿಯನೀತನು - ಸಚಮಾನಃ=ಸಂಗಚ್ಛಮಾನಃ - ಆಗಾತ್=ವನಂ ಪ್ರಾಪ್ತಃ - ಸ್ವಸಾರಂ (ಇದು ಯೌಗಿಕ ಶಬ್ದವು) ಸೀತಾಂಗ್ರಹೀತುಂ, ಜಾರಃ=ರಾವಣಃ, ಪಶ್ಚಾತ್- ರಾಮಪರೋಕ್ಷೆ, ಅಭ್ಯೇತಿ=ಆಗತಃ - ತತೋ ರಾವಣೇ ಹತೇ ಅಗ್ನಿಃ=ಅಗ್ನಿದೇವಃ, ಸುಪ್ರಕೇತೈಃ=ಶ್ರೇಷ್ಠಜ್ಞಾನಯುಕ್ತೈಃ ದ್ಯುಭಿಃ=ರಾಮದಾರೈಃ ಸೀತಾಯಾಸಹ ರಾಮಮಭಿ=ಶ್ಯಾಮವರ್ಣಸ್ಯ - ಶ್ರೀರಾಮಭದ್ರಸ್ಯ ಅಭಿಮುಖಂ-ರುಶದ್ಭಿಃ=ಶ್ವೇತವರ್ಣೈಃ ತೇಜೋಭಿಃ ಅಸ್ಥಾತ್= ಉಪಸ್ಥಿತಃ

ಋಗ್ವೇದದ ಮಂತ್ರ ಸಂಹಿತೆಯಲ್ಲೂ - ಶ್ರೀರಾಮತಾಪಿನೀಯ ಉಪನಿಷತ್ತಿನಲ್ಲೂ ಇತಿಹಾಸ ಪುರಾಣಾದಿಗಳಲ್ಲೂ ಭಗವಾನ್ ಶ್ರೀರಾಮನ ಅವತಾರ ಸ್ವರೂಪವವು ಸವಿಸ್ತಾರವಾಗಿ ವರ್ಣಿಸಲ್ಪಟ್ಟಿರುತ್ತೆ ಶ್ರೀರಾಮನು ಧರ್ಮದ ಸಾಕ್ಷಾತ್ ಸ್ವರೂಪ "ರಾಮೋ ವಿಗ್ರವಾನ್ ಧರ್ಮಃ" ಶ್ರೀರಾಮಾಯಣದ ವಿಶ್ವಾಮಿತ್ರನಲ್ಲಿ ಆದರ್ಶಗುರುವನ್ನು ಶ್ರೀರಾಮನಲ್ಲಿ ಆದರ್ಶ ಶಿಷ್ಯನನ್ನು, ದಶರಥನಲ್ಲಿ ಆದರ್ಶಪಿತಾವನ್ನು, ಕೌಸಲ್ಯೆಯಲ್ಲಿ ಆದರ್ಶಮಾತೆಯನ್ನು, ರಾಮನಲ್ಲಿ ಆದರ್ಶಪುತ್ರನನ್ನು, ಲಕ್ಷ್ಮಣ ಭರತರಲ್ಲಿ ಆದರ್ಶ ಸಹೋದರರನ್ನೂ, ನಾವು ಕಾಣಬಹುದು, ಆದರ್ಶ ಪತ್ನಿ, ಆದರ್ಶ ಸ್ವಾಮಿ, ಸೇವಕ, ಧರ್ಮನೀತಿ, ಸಮಾಜಸೇವೆ, ಸತ್ಯ ಪರಾಯಣತೆ, ಆದರ್ಶ ತ್ಯಾಗ, ಆದರ್ಶ ಪ್ರೇಮ ಇತ್ಯಾದಿಗಳು ರಾಮಾಯಣ ದರ್ಶನದಿಂದ ನಮಗಾಗುತ್ತವೆ ಅನೇಕ ಆದರ್ಶಗಳನ್ನು ಪ್ರತಿಪಾದಿಸುವ ಮಹಾ ಆದಿಕಾವ್ಯ ರಾಮಾಯಣ *

****************************
****************************

# ಮಿಥಿಲಾ ಮಹೋತ್ಸವ

ವಿದ್ವಾನ್ ಬ ನ ಗುಂಡೂರಾವ್

ನಿಗಮಾಗಮಗಳ ತತ್ವಜಿಜ್ಞಾಸೆಯಲ್ಲಿ ಭಗವಾನ್ ವ್ಯಾಸರಂತೆ, ಸಲ್ಲಲಿತ ಮೃದುಮಧುರ ರಸಭರಿತ ಶಬ್ದಪ್ರಯೋಗದಲ್ಲಿ ಭಗವಾನ್ ವಾಲ್ಮೀಕಿಯಂತೆ, ವೈರಾಗ್ಯದಲ್ಲಿ ಶುಕಮಹರ್ಷಿಯಂತೆ, ಭಕ್ತಿಯಲ್ಲಿ ಪ್ರಹ್ಲಾದನಂತೆ, ರಾಮನಾಮ ಜಪಾನುಷ್ಠಾನದಲ್ಲಿ ಸದಾಶಿವನಂತೆ

ಹೀಗೆಲ್ಲ ಕೊಂಡಾಡಿದ್ದಾರೆ ಸಂತವಾಗ್ಗೇಯಕಾರ ಸದ್ಗುರು ತ್ಯಾಗರಾಜರನ್ನು ಇವರು ರಚಿಸಿದ ರಸಮಯ ಕೃತಿಗಳನ್ನು ಹಾಡುವುದು ಬೇರೆ ಅಧ್ಯಯನ ಮಾಡುವುದು ಬೇರೆ ಸಂಗೀತ ಸಾಹಿತ್ಯಗಳ ಸುಮಧುರ ಮಿಶ್ರಣದಂತಿರುವ ಈ ಮಹಾನುಭಾವನ ಕೀರ್ತನೆಗಳು, ಕರ್ನಾಟಕ ಸಂಗೀತದ ಮಾತ್ರವಲ್ಲ ಭಾರತೀಯ ಸಂತ ಸಾಹಿತ್ಯದಲ್ಲಿ ಅಜರಾಮರ ಕೀರ್ತಿಯನ್ನು ಪಡೆದಿವೆ

ಸದ್ಗುರು ತ್ಯಾಗರಾಜರು ನವವಿಧ ಭಕ್ತಿಯ ಪ್ರತಿಮೂರ್ತಿ ಸರಳಜೀವನ ಭವ್ಯಚಿಂತನದ ರಮ್ಯಮೂರ್ತಿ ದಯಾನಿಧಿ ದಾಶರಥಿಯ ಪರಿಪೂರ್ಣ ಕೃಪೆಗೆ ಪಾತ್ರನಾದ ಈ ಭಕ್ತವರ ಆದಿಕವಿ ವಾಲ್ಮೀಕಿಯ ಪುನರವತಾರ ಎಂದರೆ ಬಹುಶಃ ಅತಿಶಯೋಕ್ತಿಯಾಗಲಾರದು ಇಪ್ಪತ್ನಾಲ್ಕು ಸಹಸ್ರ ಶ್ಲೋಕಗಳಲ್ಲಿ ರಘುವರ ಚರಿತೆಯನ್ನು ನಭೂತೇನ ಭವಿಷ್ಯತಿ ಎಂಬಂತೆ ರಚಿಸಿದರೂ ಸಹ – ವಾಲ್ಮೀಕಿಗೆ ತೃಪ್ತಿಯಾಗಲಿಲ್ಲ ಆದ್ದರಿಂದಲೇ – ಅತೃಪ್ತಸ್ತಂ ಮುನಿಂ ವನ್ದೇ ಪ್ರಾಚೇತಸಮಕಲ್ಮಷಮ್ – ಎಂಬ ಮಾತು ಬಳಕೆಯಲ್ಲಿದೆ ತ್ಯಾಗರಾಜರಾಗಿ ಪುನರವತರಿಸಿದನೋ ವಾಲ್ಮೀಕಿ !! ಎಂದು ಭಾರತೀಯರು ಭಾವಿಸುವುದರಲ್ಲಿ ತಪ್ಪೇನೂ ಇಲ್ಲವೆಂದು ಅನೇಕರ ಅಭಿಪ್ರಾಯ ಪಾರ್ಕೇಗೇಯೇಚ ಮಧುರಂ – ಆದ ಮುನಿಪ್ರಣೀತ ರಘುವರ ಚರಿತೆ–ಮತ್ತೆ ಅವತರಿಸಿದೆ ತ್ಯಾಗರಾಜರ ಸುಮಧುರ ಕೀರ್ತನೆಗಳ ರೂಪದಲ್ಲಿ ರಾಮಾಯಣದ ಪ್ರತಿಯೊಂದು ಸನ್ನಿವೇಶಕ್ಕೂ ಸರಿಹೊಂದುವಂತೆ ಸದ್ಗುರು ತ್ಯಾಗರಾಜರು ಕೀರ್ತನೆಗಳನ್ನು ರಚಿಸಿದ್ದಾರೆ ಈ ಸುಧಾಸದೃಶ ಅಮೂಲ್ಯ ಕೀರ್ತನ ಸಾಹಿತ್ಯವನ್ನು ತ್ಯಾಗರಾಜ ರಾಮಾಯಣ – ಎಂದರೆ ಯಾರೂ ಆಕ್ಷೇಪಿಸಲಾರರು ಲೋಕಾಭಿರಾಮನಾದ ಶ್ರೀ ರಾಮಚಂದ್ರನ ಮಣಿಖಚಿತ ಕಾಂಚನ – ಪ್ರಭಾವಳಿಯಂತಿದೆ ಈ ಕೀರ್ತನೆಗಳು

ಸದ್ಗುರು ತ್ಯಾಗರಾಜರು ಪ್ರತಿನಿತ್ಯ ಪರಮ ಭಕ್ತಿಯಿಂದ ಪಾರಾಯಣ ಮಾಡುತ್ತಿದ್ದದ್ದು ಲೋಕೋತ್ತರವಾದ ಎರಡು ಗ್ರಂಥಗಳನ್ನು ಒಂದು ಆದಿಕಾವ್ಯರಾಮಾಯಣ ಒಂದು ಪೋತನ ಬಾಗವತ ಒಂದು ಸಂಸ್ಕೃತ ಕಾವ್ಯರತ್ನ – ಒಂದು ಆಂಧ್ರ ಕಾವ್ಯ ರತ್ನ ನಿರಂತರ ರಾಮನಾಮ ಜಪ – ಧ್ಯಾನಗಳಿಂದ ಪುನೀತವಾದ ವ್ಯಕ್ತಿ ಪಾರಾಯಣ ಸಮಯದಲ್ಲಿ ಅದೆಂತಹ ದಿವ್ಯ ರಸಾನುಭವ ಪಡೆದಿರಬಹುದು – ಇದನ್ನು ನಾವು ಕಲ್ಪಿಸಿಕೊಳ್ಳಲಿಕ್ಕೆ ಸಹ ಸಾಧ್ಯವಿಲ್ಲ

ಬಾಳೆಲ್ಲ ರಾಮಮಯವಾದಾಗ ಜೀವಕ್ಕೆ ಶುಭತರ ಸಂಸ್ಕಾರ ಒದಗಿ ಬಹುತ್ತದೆ ಸಂಸ್ಕಾರವಂತನ ಮಾತು ಸಂಸ್ಕೃತಿಯುಕ್ತವಾಗಿರುತ್ತದೆ ಅದು ಹೃದಯದಿಂದ ನೇರವಾಗಿ ಹೊರಟ ಅನುಭವವಾದ್ದರಿಂದ, ಚಿರಸ್ಥಾಯಿಯಾದ ಪರಿಣಾಮ ಬೀರುತ್ತದೆ ಕೌಶಿಕನ ಯಜ್ಞರಕ್ಷಣೆಗೆಂದು ರಘುಕುಲ ದೀಪಕರಾದ ರಾಮಲಕ್ಷ್ಮಣರು ಹೊರಟಿದ್ದಾರೆ ದಶರಥ ಮಕ್ಕಳನ್ನು ಸಂತೋಷವಾಗಿ ಕಳಿಸಿಕೊಟ್ಟಿದ್ದಾನೆ – "ದದೌ ಕುಶಿಕಪುತ್ರಾಯ ಸುಪ್ರೀತೇನಾಂತರಾತ್ಮನಾ" ಈ ಸನ್ನಿವೇಶವನ್ನು ತ್ಯಾಗರಾಜರು ತುಂಬ ಅನುಭವಿಸಿದ್ದಾರೆ

ವೆಡೆಲಸು ಕೋದಂಡಪಾಣಿ
ಅನುಜ ಸೌಮಿತ್ರಿತೋ ಗೂಡಿ ||

ಇದು ತೋಡಿರಾಗದ ಕೃತಿ ಆ ಕುಮಾರರ ಅಲಂಕಾರ ಗಮನ ವೈಖರಿ – ವೈಭವ – ಇಲ್ಲಿ ದರ್ಶನೀಯ






# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5-00 ಪ್ರಾ 5-30 | ಪ್ರಾ ೫-೦೦ ಪ್ರಾ 5-30 |
| ವಿಶ್ವರೂಪ ಸರ್ವದರ್ಶನ | ಪ್ರಾ 5 30 ಪ್ರಾ 6-00 | ಪ್ರಾ ೫-೩೦ ಪ್ರಾ 6-00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6-00 ಪ್ರಾ 6-30 | ಪ್ರಾ 6-00 ಪ್ರಾ 6-30 |
| ಸಹಸ್ರನಾಮಾರ್ಚನೆ | ಪ್ರಾ 6-30 ಪ್ರಾ 7-00 | ಪ್ರಾ 6-30 ಪ್ರಾ 7-00 |
| ಮೊದಲನೇ ಗಂಟೆ | ಪ್ರಾ 7-00 ಪ್ರಾ 7-30 | ಪ್ರಾ 7-00 ಪ್ರಾ 7-30 |
| ಸರ್ವದರ್ಶನ | ಪ್ರಾ 7-30 ಪ್ರಾ 10-00 | *ಅಭಿಷೇಕ ಪ್ರಾ 7-30 ಪ್ರಾ 8 30 |
| | | ಸಮರ್ಪಣ ಪ್ರಾ 8-30 ಪ್ರಾ 9-30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10 00 ಪ್ರಾ 10-30 | ಪ್ರಾ 9-30 ಪ್ರಾ 10-30 |
| * ಆರ್ಜಿತ | | ಕಲ್ಯಾಣೋತ್ಸವ ಪ್ರಾ 10-30 ಮ 12-00 |
| ಸರ್ವದರ್ಶನ | ಪ್ರಾ 10-30 ಸಂ 6-30 | ಪ್ರಾ 10-30 ಸಂ 6-30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6-30 ರಾ 7-00 | ಸಂ 6-30 ರಾ 7-00 |
| ಸರ್ವದರ್ಶನ | ರಾ 7-00 ರಾ 8-45 | ರಾ 7-00 ರಾ 8-45 |
| ಏಕಾಂತ ಸೇವೆ | ರಾ 8-45 ರಾ 9-00 | ರಾ 8-45 ರಾ 9-00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200-00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100-00 |
| ಅರ್ಚನೆ (ಒಂದು ವರ್ಷಕ್ಕೆ) | ರೂ 42-00 |
| ಶಾಶ್ವತ ನಿತ್ಯಾರ್ಚನೆ | ರೂ 542-00 |

ಶಿರಮುನ ಕೊಂಡೇಲು ಜಾರ
ಉರಮುನ ಹಾರಮುಲು ಮೆರೆಯ

ತಲೆಯ ಮೇಲೆ ಸ್ವಲ್ಪ ವಾಲಿದಂತಿರುವ ಶಿಖೆಯ ಗಂಟು - ಅದರಿಂದ ನೇತಾಡುತ್ತಿರುವ ಮುತ್ತಿನಹಾರ - ಕೊರಳಲ್ಲಿ ಮುತ್ತಿನ ಸರ - ಧರಿಸಿದ ಆ ಧನುರ್ಬಾಣಗಳು - ಈ ವಯ ಣದ ಉದ್ದೇಶವೇನು? ತ್ಯಾಗರಾಜರು ಹೇಳು ತ್ತಾರೆ- ವಸುಧಬಾಧಲೆಲ್ಲ ದೀರ್ಪ - ಭೂದೇ ವಿಯ ಭಾರವನ್ನು ಕಡಿಮ ಮಾಡುವುದಕ್ಕಾಗಿ ॥

ಪ್ರಭುರಾಮ ಚಂದ್ರನನ್ನು - ಶಿಷ್ಯನಂತೆ ಹಿಂಬಾ ಲಿಸಿ ಬರುತ್ತಿರುವ ಕೃಪೆ ಎಂತಹುದೆಂದು ಭಾವಿಸಿ ನೋಡುತ್ತ ರಾಜರ್ಷಿ ವಿಶ್ವಾಮಿತ್ರ ತನ್ನ ತಪಸ್ಸು ಸಾರ್ಥಕವಾಯ್ತೆಂದೇ ಯೋಚಿಸುತ್ತಾನೆ

ತನವೆಂಟಜನ ಜೂಚಿ
ಉಪ್ಪೊಂಗ ಕೌಶಿಕುಡು
ತಪಮೇಮಿ ಜೇಸೆನೋ - ತೆಲಿಯಾ

ಎನ್ನುತ್ತಾರೆ ತ್ಯಾಗರಾಜರು - ಯದುಕುಲ ಕಾಂಬೋಧಿ ರಾಗದ ಕೀರ್ತನೆಯಲ್ಲಿ ರಾಮ ಚಂದ್ರನ ಮುದ್ದು ಕಪೋಲಗಳನ್ನು ಮುದ್ದಿಸಲು ಕೌಸಲ್ಯೆ, ಇತ್ತಬಾ - ಅತ್ತಬಾ - ಎಂದು ಕರೆಯಲು ದಶರಥ, ಶಾಪ ಹರಿದು ರೂಪು ಪಡೆಯಲು ಅಹಲ್ಯೆ - ಮಗಳನ್ನು ಕೊಟ್ಟು ಹಿಗ್ಗಲು ಜನಕ, ಲಜ್ಜಾವನತಮುಖಿಯಾಗಿ, ಓರೆಕ ಣ್ಣುಗಳಿಂದ ನೋಡುತ್ತ ರಾಮನೊಡನೆ ಸಪ್ತಪದಿ - ಹೆಜ್ಜೆ ಹಾಕಲು - ಜಾನಕಿ, ಆಜ್ಞಾನುವರ್ತಿ ಯಾಗಿ ಬರುತ್ತಿರುವ ಕೃಪಾಮೂರ್ತಿಯನ್ನು ಕಂಡು ಹಿಗ್ಗಲು ವಿಶ್ವಾಮಿತ್ರ - ಇವರೆಲ್ಲರೂ ಅದ್ಯಾವ ತಪಸ್ಸು ಮಾಡಿ ಈ ಭಾಗ್ಯ ಪಡೆದರೋ!!

ಕೌಶಿಕನ ಕಣ್ಸನ್ನೆಯರಿತು ರಾಮಚಂದ್ರ ಮಾರೀಚನ ಮೇಲೆ ಬಾಣ ಪ್ರಯೋಗ ಮಾಡಲು ಸಜ್ಜಾಗಿ ನಿಂತಿದ್ದಾನೆ ಆತನ ಹಣೆಯ ಮೇಲೆ ಮುದ್ದಾದ ಮುಂಗುರುಳು ಸುರುಳಿಸುರುಳಿ ಯಾಗಿ ಓಲಾಡುತ್ತಿದೆ ಕೌಶಿಕನಾದರೋ ಆ ಮುಂಗುರುಳ ಚೆಲುವನ್ನು ನೋಡಿನೋಡಿ ಹಿಗ್ಗುತ್ತಿದ್ದಾನೆ

ಅಲಕ ಲಲ್ಲಾಡಗ ಗನಿ ಆ ರಾಣ್ಮುನಿ ಎಟು ಪೊಂಗೆನೋ!! ರಾಜರ್ಷಿ (ರಾಣ್ಮುನಿ) ವಿಶ್ವಾಮಿ ತ್ರನ ಸಂತೋಷಕ್ಕೆ ಪಾರವಿಲ್ಲ

ಯಜ್ಞರಕ್ಷಣಾನಂತರ ವಿಶ್ವಾಮಿತ್ರ ಹಾಗೂ ರಾಮಲಕ್ಷ್ಮಣರು ಮಿಥಿಲೆಯ ಕಡೆಗೆ ಪಯಣ ಬೆಳೆ

ಸಿದರು ದಾರಿಯಲ್ಲಿ ಯಾವುದೋ ಅನಿರ್ವಚನೀಯ ವ್ಯಥೆಯ - ಆರ್ತನಾದ"

ಮರುಗೇಲರಾ ಓ ರಾಘವಾ (ಜಯನ್ತಶ್ರೀರಾಗ) ಸಹಜ ಕರುಣಾಳು ರಾಘವನ ಕಿವಿಗೆ ಈ ಆರ್ತನಾದ ಕೇಳದಿರಲು ಸಾಧ್ಯವೇ? ಅದು ಗೌತಮಸತಿ ಅಹಲ್ಯೆಯ ದಯನೀಯವಾಣಿ ಮುನಿಸತಿಗೆ ಜೀವದಾನ ಮಾಡಿದ ರಾಮಚಂದ್ರನ ಶ್ರೀಪಾದಮಹಿಮೆಯನ್ನು ತ್ಯಾಗರಾಜರು ತುಂಬ ಅನುಭವಿಸಿದ್ದಾರೆ ಶ್ರೀರಾಮ ಪಾದಮಾ ನೀ ಕೃಪ ಚಾಲುನೇ - ಎಂದು ಹಾಡಿದ್ದಾರೆ

ಮಿಥಿಲೆ ರಾಜರ್ಷಿ ಜನಕನ ರಾಜಧಾನಿ ವೈಭವಕ್ಕೂ ಪವಿತ್ರತೆಗೂ ಹೆಸರಾದ ನಗರ ನಗರದ ಹೊರವಲಯದಲ್ಲಿ ಕಂಗೊಳಿಸುವ ರಾಜೋದ್ಯಾನ - ರಾರಾ ಸೀತಾರಮಣೀಮನೋಹರ - ಎಂದು ಹಿಂದೋಳ ವಸಂತರಾಗದಲ್ಲಿ ಹಾಡಿ ಕೈಬೀಸಿ ಕರೆಯುತ್ತಿದೆ ಪ್ರಭುರಾಮಚಂದ್ರನನ್ನು ಒಬ್ಬ ರಾಜರ್ಷಿ ಇನ್ನೊಬ್ಬ ರಾಜರ್ಷಿಗೆ ಅರ್ಘ್ಯಪಾದ್ಯಗಳನ್ನು ನೀಡಿ ಗೌರವದಿಂದ ಸ್ವಾಗತಿಸುತ್ತಿದ್ದಾನೆ ಕಂಗೊಳಿಸುವ ಪುಣ್ಯಮೂರ್ತಿಗಳನ್ನು ನೋಡಿ ಧನ್ಯರಾಗಲೆಂದು ಜನ ಗುಂಪುಕೂಡಿ ಬರುತ್ತಾರೆ

## ಚೂತಾಮು ರಾರೇ - ಸುದತುಲಾರ (ಆರಭಿ)

ಶ್ರೀರಾಮನ ಪಾದಧೂಳಿಯಿಂದ ಪಾವನವಾದದ್ದೇ ಮಿಥಿಲೆಯ ಭಾಗ್ಯ - ಮಿಥಿಲಾನಗರೀ ಪತೇಃ ಭಾಗ್ಯಾನಾಂ ಪರಿಪಾಕಾಯ ಭವ್ಯರೂಪಾಯ ಮಂಗಳಂ -ಎಂದು ನಗರಕ್ಕೆ ನಗರವೇ ಮಂಗಳಾಶಾಸನ ಮಾಡುತ್ತಿದೆ ವಿಶ್ವಾಮಿತ್ರರು ಶಿವಧನುಸ್ಸಿನ ಪ್ರಸ್ತಾಪ ಮಾಡಿದಾಗ - ಆ ಭಾಗವನ್ನು ಆದಿಕಾವ್ಯದಲ್ಲಿ ಪಾರಾಯಣ ಮಾಡುವಾಗ ತ್ಯಾಗರಾಜಸ್ವಾಮಿಯವರ ಮೈಯಲ್ಲಿ ಮಿಂಚೊಂದು ಸಂಚರಿಸಿ ಹೋಗಿರಲಿಕ್ಕೆ ಸಾಕು ಜನಕ ರುದ್ರ ಚಾಪದ ವಿಷಯವನ್ನೆಲ್ಲ ಮುನಿಗೆ ಬಿನ್ನವಿಸಿ - ಅದನ್ನು ಸಭೆಗೆ ತರಿಸಿದ "ವತ್ಸ - ರಾಮ - ಧನುಂಪಶ್ಯ" - ರಾಮಚಂದ್ರ ಈ ಮಹಾವಸ್ತುವನ್ನು ನೋಡು - ಎಂದರು - ಕೌಶಿಕರು ಎಂಟು ಚಕ್ರಗಳ ಒಂದು ವಾಹನದ ಮೇಲಿದೆ ಮೇರು ಸದೃಶ ಧನಸ್ಸು" ಅದನ್ನೆತ್ತಿ ಹೆಗೆ ಏರಿಸುವ ಧೀರನಿಗೆ ಮೈಥಿಲಿಯನ್ನು ಧಾರೆ ಎರೆಯುವುದು - ಇದು ಜನಕನ ಉದ್ದೇಶ ರಾಮಚಂದ್ರನ ಮುದ್ದು ಮುಖದ ಮೇಲೆ ಅರ್ಥಪೂರ್ಣವಾದ ಗಂಭೀರ ಮಂದಹಾಸದ ಅಲೆಯೊಂದು ಸುಳಿದು ಹೊಯ್ತು ಒಮ್ಮೆ ಜನಕನತ್ತ, ಒಮ್ಮೆ ಧನುವಿನತ್ತ, ಒಮ್ಮೆ ಸಭೆಯತ್ತ ತನ್ನ ದೃಷ್ಟಿಯನ್ನು ಹರಿಸಿದ ಆ ಮೇರು ಸಮಾನಧೀರನ ಪುಣ್ಯ ಕರಸ್ಪರ್ಶದ ಸುಮುಹೂರ್ತಕ್ಕಾಗಿ ಶಿವಧನುಸ್ಸು ಅದೆಷ್ಟು ದಿನದಿಂದ ಕಾದಿತ್ತು"

ಧರ್ಮಾತ್ಮ ಪಾದಂಬು ಸೋಕ
ಶಿವ ಚಾಪಂಬು
ತವ ಮೇಳು ಚೇಸೆನೋ ತೆಲಿಯಾ||

ಶ್ರೀರಾಮಚಂದ್ರನ ಭೀಮ ಬಾಹುಗಳ ಸೆಳೆತಕ್ಕೆ ಕ್ಷಣಾರ್ಧದಲ್ಲಿ ಮುರಿದು ಬಿದ್ದ ಶಿವಚಾಪ - ರಾಮನ ಪಾದದ ಮೇಲೆ ಬಿದ್ದ ಆ ಒಂದು ಚೂರು - ಅದೆಷ್ಟು ತಪಪಾಚರಿಸಿತ್ತೋ - ಎನ್ನುತ್ತಾರೆ ತ್ಯಾಗರಾಜರು ಶಿವ ಚಾಪದ ಒಂದು ಚೂರು ರಾಮನ ಕೈಯಲ್ಲಿ - ಇನ್ನೊಂದು ಚೂರು ಪಾದದ ಮೇಲೆ ಒಂದು ಚೂರಿಗೆ ಪುಣ್ಯ ಕರಸ್ಪರ್ಶಭಾಗ್ಯ - ಇನ್ನೊಂದು ಚೂರಿಗೆ ಪುಣ್ಯ ಪದಸ್ಪರ್ಶ ಭಾಗ್ಯ ಈ ಚಿತ್ರವನ್ನು ಮನಸಾರ ಕಲ್ಪಿಸಿಕೊಂಡು ಧ್ಯಾನಿಸಿದ ತ್ಯಾಗರಾಜರು ಕನ್ನಡ ಗೌಳರಾಗದಲ್ಲಿ ಹಾಡಿದ್ದಾರೆ -

ಸೊಗಸು ಚೂಡ ತರಮಾ
ನಿಗನಿಗಮನುಚು ಕಪೋಲ
ಯುಗಮು ಚೇ ಮರೆಯು - ನೀ ಮೋಮು

ಸೊಗಸು ಚೂಡತರಮಾ - ಎಂಬ ಮಾತು ಜನಕ, ಸೀತೆ - ವಿಶ್ವಾಮಿತ್ರ - ಶತಾನಂದ - ಮಹಾಸಭೆ - ಎಲ್ಲರೂ ಆಡಿರಬಹುದು ಎಲ್ಲ ಆನಂದವನ್ನು ಕ್ರೋಢೀಕರಿಸಿ ತ್ಯಾಗರಾಜರು ಹಾಡಿರಬಹುದು

ಮಿಥಿಲಾಮಹೋತ್ಸವ - ಸೀತಾಕಲ್ಯಾಣ - ಜನರ ಸಂಭ್ರಮ - ಅರಮನೆಯ ಸಡಗರ - ಲಗ್ನಮಂಟಪದ ಅಲಂಕಾರ - ಜನಕ ದಶರಥರ ಗಂಭೀರ ಸಂಭಾಷಣೆ - ಎಲ್ಲವೂ ಕಣ್ಣಿಗೆ ಕಟ್ಟುವಂತಿದೆ, ಇಂದಿಗೂ - ಯುಗಯುಗಗಳು ಉರುಳಿಹೋದರೇನಂತೆ - ಭಾರತೀಯರಿಗೆ - ರಾಮಾಯಣ - ನಿತ್ಯರಾಮಾಯಣ" ಸತ್ಯರಾಮಾಯಣ - ರಸಭರಿತ - ನವರಸಭರಿತ ರಾಮಾಯಣ "

ಅಲಂಕಾರ ತಾಂ ವೇದಿಂ
ಗಂಧಪುಷ್ಪೈಃ ಸಮಂತತಃ
ಸುವರ್ಣ ಪಾಲಿಕಾಭಿಶ್ಚ
ಚಿತ್ರ ಕುಂಭೈಶ್ಚ ಸಾಂಕುರೈಃ||
ಶಂಖ ಪಾತ್ರೈಃ ಸ್ರುವೈಃ ಸ್ರುಗ್ಭಿಃ
ಪಾತ್ರೈರರ್ಘ್ಯಾದಿ ಪೂಜಿತೈಃ
ಲಾಜಾಪೂರ್ಣೈಶ್ಚ ಪಾತ್ರೀಭಿಃ
ಅಕ್ಷತೈರಪಿ ಸಂಸ್ಕೃತೈಃ ||

ಲಗ್ನ ಮಂಟಪದಲ್ಲಿ ಶಾಸ್ತ್ರೋಕ್ತವಾದ ಪರಿಕರಗಳೆಲ್ಲ ಸಿದ್ಧವಾಗಿದೆ ಸರ್ವಾಲಂಕಾರಭೂಷಿತಳಾದ ಸೀತೆಯನ್ನು ಕರೆತಂದು ರಾಮಚಂದ್ರನ ಮುಂದೆ ನಿಲ್ಲಿಸಿದ್ದಾರೆ

ಇಯಂ ಸೀತಾ ಮಮಸುತಾ
ಸಹಧರ್ಮಚರೀತವ
ಪತಿವ್ರತಾ ಮಹಾಭಾಗಾ
ಛಾಯೇವಾನುಗತಾ ಸದಾ
ಪ್ರತೀಚ್ಛ ಚೈನಾಂ ಭದ್ರಂತೇ
ಪಾಣಿಂ ಗೃಹ್ಣೀಷ್ವಪಾಣಿನಾ
ಇತ್ಯುಕ್ತ್ವಾ ಪ್ರಾಕ್ಷಿಪದ್ರಾಜಾ
ಮಂತ್ರಪೂತ ಜಲಂ ತದಾ

ಆದಿಕವಿಯ ಈ ಅಮರ - ಅನುಪಮ ಶೈಲಿಯಲ್ಲಿ ಭಾರತೀಯ ಸಂಸ್ಕೃತಿಯ ಸಾರವಡಗಿದೆ - ವಿವಾಹದ ಪವಿತ್ರತೆ ಅಡಗಿದೆ

ತ್ಯಾಗರಾಜರು ಪವನಜಸ್ತುತಿ ಪಾತ್ರನೂ, ಪಾವನ ಚರಿತ್ರನೂ, ಜಗದಭಿರಾಮ ಸಾಕೇತ ಧಾಮನೂ ಆದ ರಾಮಚಂದ್ರನ ಕಲ್ಯಾಣ ವೈಭವವನ್ನು - ಸೀತಾ ಕಲ್ಯಾಣವೈಭವವನ್ನು - ಬಣ್ಣಿಸಿ ಬಣ್ಣಿಸಿ ಹಿಗ್ಗಿದ್ದಾರೆ - ಧನ್ಯರಾಗಿದ್ದಾರೆ ಮಾ ಜಾನಕೀ ಚೇಬಟ್ಟಗಾ ಮಹರಾಜುವೈತಿವಿ - ನಮ್ಮ ಜಾನಕಿಯ ಕೈ ಹಿಡಿದದ್ದರಿಂದ ಮಹಾರಾಜನಾದೆ - ಎಂದು ಹೇಳುವಾಗ - ರಾಮಾಯಣವೆಲ್ಲ - ಸೀತಾಯಾಃ ಚರಿತಂ ಮಹತ್ - ಎಂಬ ಆದಿಕವಿಯ ವಾಕ್ಯನೆನಪಾಗುತ್ತದೆ

ಜಾನಕೀರಮಣ ಭಕ್ತ ಪಾರಿಜಾತ
ಪಾಹಿ ಸಕಲ ಲೋಕಶರಣ

ತ್ಯಾಗರಾಜರ ಈ ಮಾತು - ಈ ಕೃತಿರತ್ನ - ಶುದ್ಧ ಸೀಮಂತಿನಿ ರಾಗದಲ್ಲಿದೆ ರಾಗ ಯಾವುದಾದರಾಗಲಿ - ಭಾರತೀಯರ ಶುದ್ಧ ಹೃದಯಗಳ ಬೇಡಿಕೆ ಇಲ್ಲಿ ಧ್ವನಿಸಿದೆ ಭಾರತೀಯರ ದೃಷ್ಟಿಯಲ್ಲಿ ಸೀತಾ ಕಲ್ಯಾಣವೆಂದರೆ ಲೋಕಕಲ್ಯಾಣ



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ)ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಪಯಸೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ ತಿ ದೇ ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ, ಕ್ಯಾಂಟೀನ್

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಂಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ**

ಗಮನಿಕೆ ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮-೩೦ ಗಂಟೆಯವರೆಗೆ ಕೆಲಸಮಾಡುತ್ತದೆ ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧-೦೦ ಗಂಟೆಯವರೆಗೆ ಕೆಲಸಮಾಡುತ್ತದೆ

# ದಕ್ಷಿಣದಲ್ಲಿ ಶ್ರೀರಾಮ

ಆದ್ಯ ರಾಮಾಚಾರ್ಯ

ವಿಶ್ವದ ವಿವಿಧ ಭಾಷೆಗಳಲ್ಲಿರುವ ಸಾಹಿತ್ಯವು ಮಾನವ ಸಂಸ್ಕೃತಿಯ ಉನ್ನತಿಗೆ ಪ್ರೇರಕ ಶಕ್ತಿಯಾಗಿದೆ ಅಭಿಜಾತಸಾಹಿತ್ಯ ಲೋಕದಲ್ಲಿ, ದಂತಕದೆಗಳು, ಹಾಗೂ ಪರಂಪರಾಗತವಾಗಿ ಬಂದ ಸಂಪ್ರದಾಯಗಳು ಮತ್ತು ಕಾವ್ಯ, ನಾಟಕ, ಶಿಲ್ಪ, ನೃತ್ಯ, ಚಿತ್ರಕಲೆ - ಹೀಗೆ ನಾನಾಪ್ರಕಾರಗಳಲ್ಲಿ ಆ ಸಂಸ್ಕೃತಿಯನ್ನು ಗುರುತಿಸಬಹುದಾಗಿದೆ ಹಸಿದವನ ಮುಂದೆ ಬಡಿಸಿಟ್ಟ ನಾನಾ ತರಹದ ಪಕ್ವಾನ್ನಗಳಂತೆ ನಮ್ಮ ಪ್ರಾಚೀನ ಸಾಹಿತ್ಯದ ರಸಾನುಭವವನ್ನು ನಾವು ಅಭ್ಯಾಸಬಲದಿಂದ ಅನುಭವಿಸಬಹುದಾಗಿದೆ

ಈ ರಸದೌತಣದ ತಟ್ಟೆಯಲ್ಲಿ ಕಬೀರದಾಸರಿಂದ ರಚಿತವಾದ ರಾಮ ರಹೀಮ ಎಂಬ ಭಾವಪೂರಿತ ಪಾಯಸವಿದೆ ಸೂರದಾಸರಿಂದ ರಚಿತವಾದ ಆನಂದರಸವಿದೆ, ತ್ಯಾಗರಾಜರು ಪುರಂದರದಾಸರು, ಆಳ್ವಾರರಿಂದ ಸಿದ್ಧಪಡಿಸಲಾದ ನಾನಾ ಬಗೆಯ ಪರಮಾನ್ನದ ರಸಗಳಿವೆ ಆದುದರಿಂದ ಭಕ್ತಿಭಾವದಿದ ರಚಿತವಾದ ಅದವಾ ಬಡಿಸಿರಲ್ಪಟ್ಟ ತಟ್ಟೆಯು ಸಾಮಾನ್ಯವಾದ ತ- ಎಂದೆನಿಸಲಾರದು ಈ ತಟ್ಟೆಯಲ್ಲಿ ಬಡಿಸಿರಲಾದ ರಸಾಸ್ವಾದನವು ಆನಂದಾವಿರ್ಭಾವ ಮೋಕ್ಷಾನಂದವನ್ನು ಕೊಡುವಂತಹದಾಗಿದೆ ಈ ವಿಚಾರವನ್ನೇ ಆಂಗ್ಲಸಾಹಿತ್ಯಕಾರರು "ಬ್ರೇಕಿಂಗ್ ದ ಬ್ರೆಡ್" ಎಂಬುದಾಗಿ ಕರೆದಿದ್ದಾರೆ ಈ ಮಾತಿಗೆ ಸಾಕ್ಷಿಯಾಗಿ ಒಂದು ಮಾತಿನಲ್ಲಿ ಉದಹರಿಸಬೇಕಾದಲ್ಲಿ ಷೇಕ್ಸಪಿಯರನ ನಾಟಕವನ್ನೋ ಅಥವಾ ಭವಭೂತಿಯ ಕೃತಿಯನ್ನೋ ರಂಗದ ಮೇಲೆ ಪ್ರದರ್ಶನ ಮಾಡಿ ಆ ಪ್ರದರ್ಶನದಿಂದ ಪ್ರೇಕ್ಷಕರು ಆನಂದಭರಿತರಾದಲ್ಲಿ ಅದನ್ನು ರೂಪಿಸಿ, ರಂಗದ ಮೇಲೆ ಪ್ರಯೋಗ ಮಾಡಿ ತೋರಿಸಿದ ಕರ್ತೃ, ಇಂದು ನಾನು ಭವಭೂತಿಯೊಂದಿಗೆ ವಿಹರಿಸಿದಂತಹ ಆನಂದವನ್ನನುಭವಿಸಿದೆ ಎಂದು ಹೇಳುತ್ತಾನೆ ಈ ಬಾವವನ್ನೇ ಆಂಗ್ಲಸಾಹಿತ್ಯಕಾರರು - "ಬ್ರೇಕಿಂಗ್ ದ ಬ್ರೆಡ್" ಎಂಬ ಪದಪ್ರಯೋಗ ಮಾಡಿ ತಮ್ಮ ಆನಂದವನ್ನು ವ್ಯಕ್ತಪಡಿಸಿದ್ದಾರೆ

ನಮ್ಮ ಪ್ರಾಚೀನ ಸಾಹಿತ್ಯ ಕೃತಿಗಳ ಅಭ್ಯಾಸದಿಂದ ಮಾನವನ ಅಂತರಾತ್ಮಕ್ಕೆ ಶಾಂತಿ ಸಮಾಧಾನಗಳು ಲಭಿಸುತ್ತವೆ ಆತನ ಜೀವನವು ಕಲಾಪೂರ್ಣವಾಗಿ ಪರಿವರ್ತನಗೊಳ್ಳುತ್ತದೆ ಅನುಭವಗಳು ನಾನಾ ತರಹದ ವರ್ಣನೆತಾಳಿ ಆತನ ಅಂತರಂಗದ ಚಕ್ಷುಗಳನ್ನು ಬೆಳಗುವಂತೆ ಮಾಡುತ್ತದೆ ಇಂಥ ಸಾಹಿತ್ಯವನ್ನೇ ಅಭಿಜಾತ ಸಾಹಿತ್ಯವೆಂದು ಗುರ್ತಿಸುತ್ತಾರೆ ರಾಮಾಯಣ ಮಹಾಭಾರತ ಕಾವ್ಯಗಳನ್ನು ಅಬಿಜಾತ ಸಾಹಿತ್ಯವೆಂದೇ ಕರೆದಿದ್ದಾರೆ

ಮಹಾಭಾರತಕ್ಕೆ ಸರಿಸಮಾನವಾದ ಗ್ರಂಥವು ವಿಶ್ವದಲ್ಲಿಯೇ ಬೇರೊಂದಿಲ್ಲ ಕನ್ನಡಸಾಡಿನಕವಿ ಕುಮಾರವ್ಯಾಸನಂತೂ ಅಸರುಗಳಿಗಿದು ವೀರ ದ್ವಿಜರಿಗೆ ಪರಮವೇದದಸಾರ, ಮಂತ್ರೀಜನಕೆ - ಬುದ್ಧಿಗುಣ, ವಿರಹಿಗಳ ಶೃಂಗಾರ, ವಿದ್ಯಾಪರಿಣತರಲಂಕಾರ ಕಾವ್ಯಕ್ಕೆ ಗುರುವೆಂದು ನಾನಾ ವಿಧದಾಗಿ ವರ್ಣಿಸಿದ್ದಾನೆ

ಬಾವಜೀವಿಗಳ ಹೃದಯಸ್ಪಂದನಗೈಯುವಂತಹ ಅಮರ ಕೃತಿ ಎಂದರೆ ರಾಮಾಯಣ ಈ ಗ್ರಂಥವನ್ನು ಕುರಿತು ವಿಶ್ವದ ನಾನಾ ಪಂಡಿತರು ವ್ಯಾಖ್ಯಗಳನ್ನು ಮಾಡಿದ್ದಾರೆ ಮತ್ತ್ರಯಾಚಾರ್ಯರೂ ಸಹ ಈ ಗ್ರಂಥಕ್ಕೆ ಟೀಕೆ ಬರೆದುದುಂಟು ಉತ್ತರಭಾರತದಲ್ಲಿ ತುಲಸೀದಾಸರಿಂದ ಈ ಕೃತಿ ಬಹು ಜನಪ್ರಿಯವಾಯಿತು ರಾಮಾಯಣ, ಮಹಾಭಾರತವನ್ನು ಕುರಿತು ಈವರೆಗೆ ರಚಿತವಾದ ಕೃತಿಗಳೆಷ್ಟು? ಎಂಬುದನ್ನು ಆದಿಶೇಷನೂ ತಿಳಿಸಿ ಹೇಳಲಾರ ಎಂದೆನಿಸುತ್ತದೆ ತಿಣಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ, ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ - ಎಂದ ಕುಮಾರವ್ಯಾಸ ಬೌದ್ಧ ಜಾತಕಗಳಲ್ಲಿಯೂ, ಜೈನ ಸಾಹಿತ್ಯದಲ್ಲಿಯೂ, ರಾಮಾಯಣ - ಮಹಾಭಾರತದ ಘಟನೆಗಳು ಕಾಣಸಿಗುತ್ತವೆ

ಶ್ರೀರಾಮನ ಉಪಾಸನೆಯೊಂದಿಗೆ ಲಲಿತ ಸಾಹಿತ್ಯ ಮಿಶ್ರಿತವಾದ ಶಿಲ್ಪಶೈಲಿಯೂ ಆರಂಭವಾಯಿತು ಭಾರತದುದ್ದಗಲಕ್ಕೂ ವ್ಯಾಪಿಸಿಕೊಂಡಿತು ಚಿತ್ರಕೂಟ ಜನಸ್ಥಾನ, ಪಂಪಾಸರೋವರ, ದನುಷ್ಕೋಟಿ, ರಾಮೇಶ್ವರ ಮೊದಲಾದ ಸ್ಥಳಗಳು ಶ್ರೀರಾಮಚಂದ್ರನ ಪರ್ಯಟನೆಯ ಪವಿತ್ರ ಸ್ಥಳಗಳಾಗಿ ಇಂದಿಗೂ ಜನಮನದಲ್ಲಿ ಬೇರೂರಿಕೊಂಡು ಬಂದಿರುವವು ಇಂದು ಈ ಸ್ಥಳಗಳನ್ನು ಕುರಿತು ಅಭ್ಯಾಸಮಾಡುವುದೂ ಅತ್ಯಾವಶ್ಯಕವೆನಿಸುತ್ತದೆ ಈ ಕಾರ್ಯದಲ್ಲಿ ಶ್ರದ್ಧೆ ಎಂಬುದು ಬಹುದೊಡ್ಡ ಶಕ್ತಿಯಾಗುತ್ತದೆ ಭವಭೂತಿಯ



ಉತ್ತರ ರಾಮಾಯಣದಲ್ಲಿ ಶ್ರೀ ರಾಮಚಂದ್ರನ ಉತ್ತರ ಕಾಲದ ಪ್ರವಾಸಗಳ ವರ್ಣನೆ ಕಾಣ ಸಿಗುತ್ತದೆ ಆದರೆ ಆ ಗೋದಾವರಿಯ ತೀರದ ಆತನ ಪ್ರವಾಸವು ಉಗಮಸ್ಥಾನದ ಸ್ಥಳವಾಗಿರ ಬಹುದೋ ಅಥವಾ ಮಧ್ಯಭಾಗದ ಸ್ಥಳವಾಗಿರ ಬಹುದೋ ಎಂದು ನಿರ್ಧಾರವಾಗಿ ಹೇಳುವುದು ಕಷ್ಟಸಾಧ್ಯವೆನಿಸುತ್ತದೆ ಆದರೂ ಸಹ ಈ ಭಾಗ ವನ್ನೆಲ್ಲ ಸಂಚರಿಸಿ ಬಂದಾಗ (ಈ ಲೇಖಕನು) ಮಹಾರಾಷ್ಟ್ರದ ಪೂರ್ವಭಾಗದಲ್ಲಿ ಆತನು ಸಂಚಾ ರಮಾಡಿರಬಹುದು ಅಥವಾ ಆತನ ಬಿಡಾರವು ಅಲ್ಲಿದ್ದಿರಬಹುದು ಎಂದೆನ್ನಿಸುತ್ತದೆ ಸೀತಾಪಹರ ಣದ ಕಥೆ ಆಂಧ್ರಪ್ರದೇಶದಲ್ಲಿರುವ ಗೋದಾ ವರಿ ತೀರದಲ್ಲಿರುವ ಭದ್ರಾಚಲವೆಂದು ಹೇಳು ತ್ತಾರೆ ಈ ಪರಿಸರದಲ್ಲಿ ಜಟಸ್ತೋಲ ಅಂದರೆ ಜಟಾಯುವಿನ ಪ್ರಳಯ ಎಂಬ ಹೆಸರಿರುವ ಸ್ಥಳ ವನ್ನೂ ಸಹ ಅಲ್ಲಿಯ ಜನರು ತೋರಿಸುತ್ತಾರೆ ನಾಗಪುರದಿಂದ ೫೦ರ ಸಮೀಪದಲ್ಲಿ ಶ್ರೀರಾಮ ಚಂದ್ರನು ತನ್ನ ಸೋದರ ಲಕ್ಷ್ಮಣ ಪತ್ನಿ ಸೀತೆ ಯೊಂದಿಗಿದ್ದನೆಂದು ಹೇಳುತ್ತಾರೆ ಬೆಟ್ಟದ ಮೇಲಿ ರುವ ಶ್ರೀರಾಮನದೇವಮಂದಿರವನ್ನು ತೋರಿ ಸುತ್ತಾರೆ ಕಾಳಿದಾಸನಿಗೆ ಈ ರಾಮಗಿರಿಯ ತಾಣವೇ ಸ್ಫೂರ್ತಿಯ ಸ್ಥಳವೆನಿಸಿತು ಮೇಘ ದೂತ ಕಾವ್ಯವು ಇಲ್ಲಿಯೆ ರಚಿತವಾಯಿತೆಂದು ಹೇಳುತ್ತಾರೆ ಮಹಾರಾಷ್ಟ್ರ ಸರ್ಕಾರವು ಆ ಸ್ಥಳ ದಲ್ಲಿ ಒಂದು ಸುಂದರವಾದ ಮೇಘದೂತ ಮಂಟ ಪವೆಂಬ ಹೆಸರಿನ ಕಟ್ಟಡವನ್ನು ಕಟ್ಟಿಸಿ, ಆ ಕಟ್ಟ ಡದ ಪ್ರತಿಯೊಂದು ಭಾಗದಲ್ಲಿಯೂ ಕವಿಯಿಂದ ರಚಿತವಾದ ಅನೇಕ ಶ್ಲೋಕಗಳನ್ನು ಕೆತ್ತಿದ್ದಾರೆ

ಮಹಾರಾಷ್ಟ್ರದಿಂದ ಹರಿದುಬರುವ ಪವಿತ್ರ ಜಲಪ್ರವಾಹವೆನಿಸಿದ ಗೋದಾವರಿಯ ಉದ್ದಕ್ಕೂ ಶ್ರೀರಾಮಚಂದ್ರನ ಜೀವನ ಪ್ರವಾಹದ ಕಥೆ ಅಂಟಿ ಕೊಂಡು ಬಂದಿದ್ದರೂ ಸಹ ಈ ಭಾಗದಲ್ಲಿ ಯಾದವರ ಕಾಲದವರೆಗೂ ಕೇವಲ ಶಿವ, ಗಣ ಪತಿ, ದುರ್ಗಾ, ಹಾಗೂ ಹನ್ನೆರಡು ಜ್ಯೋತಿರ್ಲಿಂ ಗಗಳಲ್ಲಿ ತ್ರ್ಯಂಬಕ, ವೈಜನಾಥ ಭೀಮಾಶಂಕರ, ನಾಗನಾಥ ಹಾಗೂ ಸ್ತ್ರೀದೇವತೆಗಳಲ್ಲಿ ಮಾಹೂ ರದ ರೇಣುಕಾ, ಕರವೀರಪುರದ ಮಹಾಲಕ್ಷ್ಮೀ, ಅಂಬೆಯ ಜೋಗೇಶ್ವರಿ, ತುಳಜಾಪುರದ ಭವಾನಿ, ಇವೇ ಮೊದಲಾದ ದೇವತೆಗಳೇ ಹೆಚ್ಚಾಗಿ ಕಾಣಬ ರುತ್ತಿದ್ದವು ಸಂತ ಏಕನಾಥರ ಕಾಲದಿಂದ ಶ್ರೀರಾ ಮಚಂದ್ರನು ತಮ್ಮ ಆರಾಧ್ಯದೇವನೆಂದು ಅವರು ಪೂಜಿಸತೊಡಗಿದರು ಅನಂತರದಲ್ಲಿ ಬಂದ ಸಮ ರ್ಥರಾಮದಾಸರು ಮಾತ್ರ ತಮ್ಮ ಜೀವಿತಾವಧಿ ಯಲ್ಲಿ ಶ್ರೀರಾಮನೊಂದಿಗೆ ಆತನ ಬಲಗೈ ಬಂಟ ನೆಂದೆನಿಸಿಕೊಂಡ ಹನುಮಂತನನ್ನು ಸಹ ಪೂಜಿ ಸುವ ಚಳುವಳಿಯನ್ನೇ ಕೈಕೊಂಡರೆಂದೆನಿಸುವುದು ಪಂಢರಾಪುರದ ವಾರಕರಿಯ ಭಕ್ತರೂ ಸಹ ತಮ್ಮ ಸಂತ ವಾಙ್ಮಯದಲ್ಲಿ ಶ್ರೀರಾಮನನ್ನೇ ಸ್ತುತಿಸಿರು ವುದುಂಟು

ಇಲ್ಲೇಕೆ ನಿಂತಿರುವೆ ರಾಮಾ
ಮನ ಮೋಹನ ಮೋಹನ ಮೇಘಶ್ಯಾಮಾ

ನಿನ್ನ ಧನುರ್ಬಾಣಗಳನ್ನೇನು ಮಾಡಿದೆ
ಟೊಂಕದ ಮೇಲೇಕೆ ಕೈಯನ್ನಿಟ್ಟಿರುವೆ 2

ನಿನ್ನ ಸೀತಾದೇವಿ ಎಲ್ಲಿರುವಳು
ಇಲ್ಲಿ ಅವಳು ರಕುಮಾಯಿಯಾಗಿರುವಳೇನು

ನಿನ್ನ ವಾನರ ದಲವೇನಾಯಿತು
ಅವರೆಲ್ಲ ಇಲ್ಲಿ ಗೋಪಾಲಕರಾಗಿರುವರೇನು 4

ನಿನ್ನ ಅಯೋಧ್ಯಾನಗರವೇನಾಯಿತು
ಇಲ್ಲಿ ನೀನು ಪಂಢರೀಪುರವನ್ನು
ನಿರ್ಮಿಸಿರುವೆ ಏನು 5

ಈ ಪದ್ಯದಲ್ಲಿ ಪಂಢರಾಪುರದಲ್ಲಿರುವ ವಿಠ್ಠ ಲನೇ ಸಂತರಿಗೆ ರಾಮನಾಗಿ, ರುಕ್ಮಿಣಿಯೇ ಸೀತೆ ಯಾಗಿ ಈ ಕ್ಷೇತ್ರವೇ ಅಯೋಧ್ಯಾಯಾಗಿ ಕಾಣಿ ಸಿಕೊಂಡಿದೆ ಆ ಶ್ರೀರಾಮಚಂದ್ರನು ಅವರಿಗೆ ನಾನಾರೂಪದಲ್ಲಿ ದರ್ಶನವನ್ನಿತ್ತಿದ್ದಾನೆ ಹೀಗೆ ರಾಮಾಯಣ ಹಾಗೂ ಮಹಾಭಾರತದ ಕಥೆಗಳು ಭಾರತೀಯರ ನರನಾಡಿಗಳಲ್ಲಿ ಗಂಗಾ, ಯಮುನೆ, ಗೋದಾವರಿ ನದಿಗಳಂತೆ ಪುಣ್ಯಪ್ರವಾಹರೂಪದಲ್ಲಿ ಭಕ್ತಿರಸ ತುಂಬಿ ಹರಿದಿರುವುದನ್ನು ನಾವು ಅಭ್ಯಾ ಸಬಲದಿಂದ ತಿಳಿಯಬಹುದು

# ಉಪವಾಸ

ಮೊನ್ನೆ ಶಾಸ್ತ್ರಿಗಳು ಮನೆಗೆ ಬಂದಿದ್ದರು "ಊಟವಾಯಿತೇ ಶಾಸ್ತ್ರಿಗಳೇ?" ಎಂದೆ "ಎಲ್ಲಿ ಬಂತಪ್ಪ ಊಟ, ಈವತ್ತು ಏಕಾದಶಿಯಲ್ಲವೋ?" ಎಂದರು "ಹಾಗಾದರೆ ಇಂದು ಏನನ್ನೂ ತೆಗೆದುಕೊಳ್ಳುವುದಿಲ್ಲ ಉಪವಾಸ" ಎಂದೆ "ಹಾಗೇನಿಲ್ಲ ಮುಸರೆ ತಿನ್ನುವಂತಿಲ್ಲ ಗೋಧಿ ಚಪಾತಿ, ರವೆ ಉಪ್ಪಿಟ್ಟು, ಹಾಲು ಹಣ್ಣುಗಳನ್ನು ಸೇವಿಸಲಡ್ಡಿಯಿಲ್ಲ" ಎಂದರು (ಮುಸರೆ ಎಂದರೆ ಅನ್ನ ಹಾಗೂ ಅಕ್ಕಿಯಿಂದ ಮಾಡಿದ ಖಾದ್ಯಗಳು, ವಲ್ಯ, ಸಾರು, ಸಾಂಬಾರು ಇತ್ಯಾದಿ) ಅವರು ನನಗಿಂತ ವಯಸ್ಸಿನಲ್ಲಿ ದೊಡ್ಡವರಾದ್ದರಿಂದ ಏನನ್ನೂ ಮಾತನಾಡದೆ ಹಾಲು ಹಣ್ಣುಗಳಿಂದಲೇ ಅವರನ್ನು ಉಪಚರಿಸಿ ಬೀಳ್ಕೊಟ್ಟೆ ಶಾಸ್ತ್ರಿಗಳು ಹೀಗೆಯೇ ಐದಾರು ಮನೆಗಳಿಗೆ ಪ್ರವೇಶಿಸಿ ಅತಿಥಿಸತ್ಕಾರ ಸ್ವೀಕರಿಸಿದರು ಮಧ್ಯಾಹ್ನ ಗೋಧಿ ಚಪಾತಿ, ರಾತ್ರಿಗೆ ರವೆ ಉಪ್ಪಿಟ್ಟು ಇದಕ್ಕೆ ಶಾಸ್ತ್ರಿಗಳು ಉಪಯೋಗಿಸಿದ ಪದ ಉಪವಾಸ

ಇನ್ನು ಶಿವರಾತ್ರಿಯ ದಿನ ಮಾಡುವಂತಹ ಉಪವಾಸವಂತೂ ಸ್ಮರಣೀಯ ರವೆ ಉಪ್ಪಿಟ್ಟು, ಕೇಸರಿಭಾತು, ಒಗ್ಗರಣೆ ಪುರಿ, ತಂಬಿಟ್ಟು, ಚಿಗಳಿ, ಪಂಚಾಮೃತ, ಹೆಸರುಬೇಳೆ, ಕೋಸುಂಬರಿ, ಜತೆಗೆ ಒಂದೆರಡು ಹಣ್ಣುಗಳು – ಪ್ರಾಯಶಃ ಇಂತಹ ಉಪವಾಸವನ್ನು ನಮ್ಮಲ್ಲಿ ಕೆಲವರು ನಿತ್ಯವೂ ಮಾಡಬಲ್ಲರು

ಇದನ್ನು ನೋಡಿದಾಗ ಉಪವಾಸವೆಂದರೆ ಆಹಾರದ ಬದಲಾವಣೆ ಎಂಬುದು ಅವರ ಕಲ್ಪನೆ ಇರಬಹುದು ನಿತ್ಯ ಒಂದೇ ರೀತಿಯ ಆಹಾರ ಸೇವಿಸಿ ಬೇಸರವಾಗಿರುವ ಕಾರಣ ಏಕಾದಶಿ ಅಥವಾ ಶಿವರಾತ್ರಿಯಂದು ಅದನ್ನು ವ್ಯತ್ಯಯ ಮಾಡುವುದು ಇದು ಖಂಡಿತ ಉಪವಾಸವಲ್ಲ

ಏಕಾದಶಿ ತಿಂಗಳಿಗೆ ಎರಡುಬಾರಿ ಬರುತ್ತದೆ ಶುಕ್ಲಪಕ್ಷದಲ್ಲಿ ಒಂದು ದಿನ, ಕೃಷ್ಣಪಕ್ಷದಲ್ಲಿ ಒಂದು ದಿನ ಭಾರತೀಯ ಧಾರ್ಮಿಕ ನಿಯಮಾವಳಿಯ ಪ್ರಕಾರ ಅಂದು ಏನನ್ನೂ ಭಕ್ಷಿಸಬಾರದು ಭಗವಂತನ ನಾಮಸ್ಮರಣೆಯಲ್ಲಿ ಕಾಲಕಳೆಯಬೇಕು ಇದನ್ನು 'ಏಕಾದಶಿ ವ್ರತ' ಎನ್ನುತ್ತಾರೆ ಕೆಲವರಂತೂ ಅಂದು ನೀರನ್ನೂ ಸಹ ಕುಡಿಯುವುದಿಲ್ಲ ಆದರೆ ಇದು ಸರಿಯಲ್ಲ 'ನಿರ್ಜಲ ಉಪವಾಸ' ಒಳ್ಳೆಯದಲ್ಲ ನೀರನ್ನು ಯಥೇಚ್ಛವಾಗಿ ಕುಡಿಯಬಹುದು ಆದರೆ ಘನಾಹಾರ ಸೇವಿಸುವಂತಿಲ್ಲ

ಉಪವಾಸ ಎಂದರೇನೆಂಬುದನ್ನು ಮಹನೀಯರು ಹೀಗೆ ನಿರ್ವಚಿಸಿದ್ದಾರೆ

ಉಪವೃತ್ತಸ್ತು ಪಾಪೇಭ್ಯಃ ಯಸ್ತು
ವಾಸೋ ಗುಣ್ಯೈಃ ಸಹ
ಉಪವಾಸಃ ಸವಿಜ್ಞೇಯಃ
ನ ಶರೀರಸ್ಯ ಶೋಷಣಮ್

ಪಾಪಕಾರ್ಯಗಳಿಂದ ದೂರವಿದ್ದು ಪರಮಾತ್ಮನ ಗುಣಗಳ ಉಪಾಸನೆಯೇ ಉಪವಾಸ ಬರೀ ಅನ್ನ ನೀರು ಬಿಟ್ಟು ದೇಹ ಒಣಗಿಸಿದ ಮಾತ್ರಕ್ಕೇ ಅದು ಉಪವಾಸವಾಗುವುದಿಲ್ಲ

ಉಪವಾಸದ ಮುಖ್ಯೋದ್ದೇಶ ವೈಜ್ಞಾನಿಕವಾಗಿ ಜೀರ್ಣಾಂಗವ್ಯೂಹಗಳಿಗೆ ವಿಶ್ರಾಂತಿಕೊಡುವುದು ಅಪಚನವಾದ ಆಹಾರವು ಅಂದು ಜೀರ್ಣವಾಗಿ ಸಂಗ್ರಹವಾಗಿರುವ ಮಲವಿಸರ್ಜನೆಯಾಗಿ ದೇಹವು ಆರೋಗ್ಯವಾಗುತ್ತದೆ ಪರಮಾತ್ಮನ ನಾಮಸ್ಮರಣೆಯಿಂದ ಮಾನಸಿಕ ಆರೋಗ್ಯವು ವರ್ಧಿಸುತ್ತದೆ ಸ್ಥೂಲಕಾಯರಂತೂ ಹದಿನೈದು ದಿನಕ್ಕೊಮ್ಮೆಯಾದರೂ ಉಪವಾಸ ಮಾಡಲೇಬೇಕು ಇದರಿಂದ ದೇಹದ ತೂಕ ಅಪೇಕ್ಷಿತ ಮಟ್ಟಕ್ಕೆ ಬರುವುದರಲ್ಲಿ ಸಂಶಯವಿಲ್ಲ

ಉಪವಾಸವೇ ನಮಗೆ ಅಭ್ಯಾಸವಿಲ್ಲವಲ್ಲ ನಾವು ಹೇಗೆ ಇದನ್ನು ಅಭ್ಯಸಿಸುವುದು ಎಂದು ಚಿಂತಿಸಬೇಡಿ ಮನಸ್ಸಿದ್ದರೆ ಮಾರ್ಗ ನಿಮ್ಮ ಆರಂಭಿಕ ಉಪವಾಸ ಹೀಗಿರಲಿ ಮಧ್ಯಾಹ್ನ ಊಟ ಮಾಡಿ ರಾತ್ರಿ ಲಘು ಉಪಾಹಾರ ಮಾಡಿಕೊಳ್ಳಿ ಹೀಗೆ ಕೆಲವು ದಿವಸಗಳು ಅಭ್ಯಸಿಸಿದ ನಂತರ ಮಧ್ಯಾಹ್ನದ ಊಟ ಬಿಟ್ಟು ರಾತ್ರಿ ಉಪಾಹಾರ ಮಾಡಿಕೊಳ್ಳಿ, ಹೀಗೆ ಕೆಲವು ದಿವಸಗಳು ಅಭ್ಯಾಸವಾದನಂತರ ನಿಮ್ಮ ಉಪವಾಸ ಕಟ್ಟುನಿಟ್ಟಾಗಿರಲಿ

ಬೆಳಗ್ಗೆ ಯೋಗಾಭ್ಯಾಸದ ನಂತರ (ನೀವು ಯೋಗಾಭ್ಯಾಸ ನಿರತರಾಗಿದ್ದರೆ) ಒಂದು ಲೋಟ ಹಾಲು ಕುಡಿಯಿರಿ ಮಧ್ಯಾಹ್ನ ಎರಡುಗಂಟೆಯ ವೇಳೆಗೆ ನೀರು ಮಜ್ಜಿಗೆಗೆ ನಿಂಬೆ ರಸ ಸೇರಿಸಿ ಕುಡಿಯಿರಿ ಮತ್ತೆ ರಾತ್ರಿ ಒಂದು ಲೋಟ ಹಾಲು ಸೇವಿಸಿ ಈ ಮಧ್ಯೆ ನೀರನ್ನು ಎಷ್ಟುಬಾರಿ ಬೇಕಾದರೂ ಕುಡಿಯಿರಿ

'ಉಪವಾಸ ದೇಹದಲ್ಲಿ ನಿಃಶಕ್ತಿಯನ್ನುಂಟುಮಾಡುತ್ತದೆ' ಎಂದು ಅತ್ಯಾಹಾರಿಗಳು ನಿಮ್ಮನ್ನು ಹೆದರಿಸಬಹುದು ಅಂತಹವರ ಮಾತುಗಳಿಗೆ ಕಿವಿಕೊಡಬೇಡಿ ಅಜೀರ್ಣವ್ಯಾಧಿಯಿಂದ ಮನುಷ್ಯ ಸಾಯುತ್ತಾನೆಯೇ ವಿನಾ ಉಪವಾಸದಿಂದಲ್ಲ ಬರೀ ನೀರನ್ನೇ ಆಹಾರವನ್ನಾಗಿ ಸೇವಿಸಿಕೊಂಡು ಹಲವು ದಿವಸಗಳವರೆಗೆ ನಾವು ಬದುಕಬಲ್ಲೆವು ಹೀಗಿರುವಲ್ಲಿ ಒಂದು ದಿನದ ಉಪವಾಸದಿಂದ ನಾವು ನಿತ್ರಾಣರಾಗುವುದಿಲ್ಲ ಅದಕ್ಕೆ ಬದಲಾಗಿ ಚಟುವಟಿಕೆಯಿಂದಿರುತ್ತೇವೆ

ಉಪವಾಸಕ್ಕೆ ಮಾನಸಿಕ ಸಿದ್ಧತೆ ಬಹು ಮುಖ್ಯ ಏಕಾದಶಿಯ ಹಿಂದಿನ ರಾತ್ರಿಯೇ ನಾಳೆ ಏಕಾದಶಿ ಎಂಬುದು ತಿಳಿದೊಡನೆಯೇ ಮಾರನೆಯ ದಿನ ಆಹಾರ ತೆಗೆದುಕೊಳ್ಳುವ ಕಾಲಕ್ಕೆ ಹಸಿವೆಯೇ ಆಗುವುದಿಲ್ಲ ಅದನ್ನೇ ಪೂರ್ವಜರು–

ಮನ ಏವ ಮನುಷ್ಯಾಣಾಂ
ಕಾರಣಂ ಬಂಧಮೋಕ್ಷಯೋಃ

ಎಂದು ಹೇಳಿದರು ಅಂದರೆ ನಮ್ಮ ಬಂಧನಕ್ಕಾಗಲೀ ಯಾ ಬಿಡುಗಡೆಗಾಗಲೀ ನಮ್ಮ ನಮ್ಮ ಮನಸ್ಸೇ ಕಾರಣ ಅಂತಹ ಮಾನಸಿಕ ಸ್ಥಿತಿಯೂ ಸಹ ಉಪವಾಸದಿಂದ ಲಭ್ಯವಾಗುತ್ತದೆ

ಹೀಗೆ 'ಉಪವಾಸ' ಅನೇಕ ರೀತಿಯಲ್ಲಿ ನಮ್ಮ ಆರೋಗ್ಯವನ್ನು ಕಾಪಾಡಬಲ್ಲದು 'ಊಟಬಲ್ಲವನಿಗೆ ರೋಗವಿಲ್ಲ' ಎಂಬ ಗಾದೆಯ ಮಾತಿನ ಅರ್ಥ ಉಪವಾಸವನ್ನೇ ಪ್ರಧಾನವಾಗಿ ಒಳಗೊಂಡಿದೆ

**ಯೋಗಾಚಾರ್ಯ ಕೆ ಕೇಶವಮೂರ್ತಿ**



# ಅವ್ವಯ್ಯಾರ್

**ಕಲ್ಯಾಣಿಮೂರ್ತಿ ರಾಮನಾಥಪುರ**

"ಭಗವಂತನೇ, ಈ ಜನರು ನನ್ನ ಸೌಂದರ್ಯದ ಹಿಂದೆ ಬಿದ್ದಿದ್ದಾರೆ ನಾನಾದರೋ ನನ್ನ ಇಡೀ ಜೀವನವನ್ನು ಸರಸ್ವತಿಯ ಸೇವೆ ಮತ್ತು ಜ್ಞಾನ ಪ್ರಸಾರದಲ್ಲಿ ತೊಡಗಿಸಲು ಇಚ್ಛಿಸುತ್ತಿರುವೆ ಎಲೈ, ವಿಘ್ನೇಶ್ವರನೇ ದಯಯಿಟ್ಟು ಈ ನನ್ನ ಸೌಂದರ್ಯವನ್ನು ಹಿಂದೆತೆಗೆದುಕೋ ನಾನು ನಿಶ್ಚಿಂತಳಾಗಿ ಶಾಂತಿಯಿಂದ ನನ್ನ ಅಭೀಷ್ಟಮಾರ್ಗದಲ್ಲಿ ಚರಿಸುವಂತೆ ಮಾಡು"

ಭಗವಂತನು ಅವ್ವಯ್ಯಾರ್‌ನ ಪ್ರಾರ್ಥನೆಯನ್ನು ಆಲಿಸಿ ಆಕೆಯ ಇಚ್ಛೆಯಂತೆಯೇ ಕ್ಷಣಮಾತ್ರದಲ್ಲಿ ಸುಂದರಿ ಅವ್ವಯ್ಯಾರನ್ನು ಸಾಧಾರಣವಾದ ವೃದ್ಧೆಯನ್ನಾಗಿಸಿದನು ಈಗ ಆಕೆಯ ವಿವಾಹಕ್ಕೆ ಪ್ರಸ್ತಾಪ ಮಾಡುವವರ್ಯಾರೂ ಮುಂದಾಗಲೇ ಇಲ್ಲ ಚಿಂತೆಯಿಂದ ಮುಕ್ತಳಾದ ಅವ್ವಯ್ಯಾರ್ ಭ್ರಮಣ ಪರ್ಯಟನ ಪ್ರಾರಂಭಿಸಿದಳು ಮಾರ್ಗದಲ್ಲಿ ಎದುರಾದ ಹಿರಿಯರಿಗೂ – ಕಿರಿಯರಿಗೂ ತನ್ನ ಸದ್ಜ್ಞಾನದ ದಾನಮಾಡಿಸುತ್ತಾ ಹೊರಟಳು

ಭಾರತದ ಪ್ರಮುಖವಾದ ಪ್ರಾಚೀನ ಸಾಹಿತ್ಯದಲ್ಲಿ ಅವ್ವಯ್ಯಾರ್ ಗಣನೀಯ ಸ್ಥಾನವನ್ನಾಕ್ರಮಿಸುವಳು ಈ ಸಂತ ಮಹಿಳೆಯನ್ನು ಪ್ರಾಚೀನ ಕಾಲದಿಂದಲೂ ಜನರು ಶ್ರದ್ಧಾಭಕ್ತಿಯಿಂದ ಸ್ಮರಣೆ ಮಾಡುತ್ತಾರೆ ತಮಿಳಿನ ಪ್ರಾಚೀನ ಸಾಹಿತ್ಯದಲ್ಲಿ ನಮಗೆ ಆದರ್ಶ ವಿಚಾರಧಾರೆ ಮತ್ತು ಶ್ರೇಷ್ಠ ಜನಜೀವನದ ಸಂಪನ್ನ ಸಭ್ಯತೆ ಮತ್ತು ಸಂಸ್ಕೃತಿಯ ದರ್ಶನವಾಗುತ್ತದೆ ಈ ಸಾಹಿತ್ಯದಲ್ಲಿ ಅನೇಕಾನೇಕ ಪ್ರತಿಭಾಶಾಲಿ ವ್ಯಕ್ತಿಗಳು ತಮ್ಮ – ತಮ್ಮ ಕೊಡುಗೆ ಕೊಟ್ಟಿದ್ದಾರೆ ಇಂತಹವರಲ್ಲಿ ಅವ್ವಯ್ಯಾರ್ ಶ್ರದ್ಧಾಪೂರ್ವಕ ಗಣನೀಯ ಮಹಿಳೆಯೇ ಹೌದು ಬಹುಶಃ ಈ ಸಾಹಿತ್ಯದಲ್ಲಿ ಇದೇ ಹೆಸರಿನ ಇಬ್ಬರು ಸಾಹಿತ್ಯಕ ಮಹಿಳೆಯರಿದ್ದಿರಬಹುದು ಒಬ್ಬಾಕೆ ತಿರುಕ್ಕುರಳನ್ನು ರಚಿಸಿದ ತಿರುವಳ್ಳುವರ್‌ನ ಸಮಕಾಲೀನಳಾಗಿದ್ದಳು ತಿರುಕ್ಕುರಲ್ ತಮಿಳು ಸಾಹಿತ್ಯದ ಸರ್ವಶ್ರೇಷ್ಠ ನೀತಿಗ್ರಂಥಗಳಲ್ಲಿ ಒಂದು ಈ ಗ್ರಂಥದ ರಚನೆ ಕ್ರಿ.ಪೂ ವೆಂದು ಹೇಳಲ್ಪಟ್ಟಿದೆ ತಮಿಳು ಸಾಹಿತ್ಯದ ಮತ್ತೊಬ್ಬ ಅವ್ವಯ್ಯಾರ್ – ಆಕೆಯ ಹೆಸರು ಕ್ರಿ.ಶ ಏಳನೇ ಶತಮಾನದ ಸಾಹಿತ್ಯಕಾರರಲ್ಲಿ ಬರುತ್ತದೆ ಕ್ರಿ.ಶ ದ ಸ್ವಲ್ಪವೇ ಹಿಂದೆ ಕಂಡು ಬಂದ ಅವ್ವಯ್ಯಾರ್ ಸಿದ್ಧ – ಸಂತ ಮಹಿಳೆಯಾಗಿದ್ದಳು ಆಕೆಯ ಆದರ್ಶ ವ್ಯಕ್ತಿತ್ವ ತಮಿಳು ಸಾಹಿತ್ಯದಲ್ಲಿ ಪ್ರೇರಣಾದಾಯಕವಾಗಿತ್ತು ಬಹುಶಃ ಈಕೆಯ ಚರಿತ್ರೆಯಿಂದ ಪ್ರಭಾವಿತಳಾಗಿ ಕ್ರಿ.ಶ ಏಳನೇ ಶತಮಾನದ ಮಹಿಳೆಯೊಬ್ಬಳು ತನಗೆ ಅವ್ವಯ್ಯಾರ್ ಎಂದೇ ನಾಮಕರಣ ಮಾಡಿಕೊಂಡಿರಬಹುದು ಮತ್ತು ಆಕೆಯ ಮಾರ್ಗವನ್ನೇ ತನ್ನ ಜೀವನಕ್ಕೂ ಅಳವಡಿಸಿಕೊಂಡಿರಬಹುದು ಅವ್ವಯ್ಯಾರ್ ಆದರ್ಶ ಮಹಿಳೆಯಾಗಿದ್ದು ಸಹೃದಯ – ಸದ್ಗುಣ ಭರಿತಳೂ ಆಗಿದ್ದಳು ಸಾಧಾರಣ ಪ್ರಜೆಗಳಿಂದ ಹಿಡಿದು ರಾಜಮಹಾರಾಜರುಗಳಿಗೆಲ್ಲಾ ತನ್ನ ಸಹಾನುಭೂತಿಯ ಪಾತ್ರವನ್ನಾಗಿಸಿದಳಲ್ಲದೆ ಜೀವನ – ಪಥದಲ್ಲಿ ಅವರ ಮಾರ್ಗದರ್ಶಕಳೂ ಆದಳು




ಅವ್ವಯ್ಯಾರ್ ಬಾಲ್ಯದಲ್ಲೇ ಅನಾಥಳಾದಳು ಸ್ವಯಂ ಕವಿಯಾಗಿದ್ದ ಮಹಾವ್ಯಕ್ತಿಯೊಬ್ಬರು ಆಕೆಯ ಪಾಲನೆ ಪೋಷಣೆ ಮಾಡಿದರು ಬೆಳೆಯುತ್ತಿದ್ದಂತೆಯೇ ಈ ಹೆಣ್ಣು ಮಗುವಿನ ಸೌಂದರ್ಯ, ಜನ ಸಾಮಾನ್ಯರಲ್ಲಿ ಚರ್ಚಾಸ್ಪದವಾಗ ತೊಡಗಿತು ಯುವತಿಯಾದ ಅವ್ವಯ್ಯಾರನ್ನು ವಿವಾಹವಾಗಲು ಶ್ರೀಮಂತ ಮನೆತನದ ಯುವಕರು ನಾಮುಂದು – ತಾಮುಂದೆಂದು ಬರಲಾರಂಭಿಸಿದರು ಆದರೆ ಅವ್ವಯ್ಯಾರ್ ಮನಸ್ಸು ಸಂಪೂರ್ಣವಾಗಿ ಧಾರ್ಮಿಕ, ಸಾಹಿತ್ಯ ಪ್ರವೃತ್ತಿಯನ್ನೇ ನೆಲೆ ಮಾಡಿ ಅದರೊಳಗೆ ವಿಲೀನವಾಗಿತ್ತು ಆದ್ದರಿಂದ ವಿವಾಹಿತಳಾಗಿ ಗೃಹಿಣಿ – ಗೃಹದ ಬಂಧನದಲ್ಲಿ ಸಿಲುಕಲು ಎಳ್ಳಷ್ಟು ಇಷ್ಟವಿರಲಿಲ್ಲ ಆದರೆ ಈಕೆಯನ್ನು ಪೋಷಿಸಿದ ಆ ಕವಿ ಪ್ರತಿಸಲವೂ ಆಕೆಗೆ ವಿವಾಹವಾಗಲು ಬಲಾತ್ಕರಿಸಿ ಆಗ್ರಹಗೊಳ್ಳುತ್ತಲಿದ್ದರು ಕಾರಣವಿಷ್ಟೆ – ಯಾವುದಾದರೂ ಶ್ರೀಮಂತ ಕುಟುಂಬಕ್ಕೆ ಇವಳನ್ನು ಕನ್ಯಾದಾನ ಮಾಡಿಕೊಟ್ಟರೆ ತಮಗೂ ಸ್ವಲ್ಪ ಆರ್ಥಿಕ ಪರಿಸ್ಥಿತಿಯ ಲಾಭ ಅವಶ್ಯಕವಾಗಿ ದೊರಕುವುದು ಹೀಗೆ ಯೋಚಿಸಿ ಪಕ್ಕದ ರಾಜ್ಯದ ರಾಜಕುಮಾರರಿಗೆ ಈಕೆಯನ್ನು ಕೊಟ್ಟು ವಿವಾಹ ಮಾಡುವುದಾಗಿ ತಾವೇ ನಿಶ್ಚಯಿಸಿದರು ಈಗ ಹುಡುಗಿ ಅವ್ವಯ್ಯಾರ್ ಇಕ್ಕಟ್ಟಿಗೆ ಸಿಲುಕಿದಳು ಏನೂ ತೋಚದೆ ತನ್ನ ಇಷ್ಟ ದೇವತೆ ವಿಘ್ನೇಶ್ವರನ ಮೂರ್ತಿ ಎದುರು ನಿಂತು ಕಣ್ಣೀರಿಡುತ್ತಾ ಪ್ರಾರ್ಥಿಸಿದಳು ಕ್ಷಣ ಮಾತ್ರದಲ್ಲೇ ಆಕೆಯ ಯೌವನ – ಸೌಂದರ್ಯ ಮಾಯವಾಗಿ ವೃದ್ಧಾವಸ್ಥೆಯನ್ನು ಹೊಂದಿದಳು

ಈ ಘಟನೆ ಪರಮಾಶ್ಚರ್ಯವೇ ಆದರೆ ಸತ್ಯ ಏಕ ನಿಷ್ಠಸಾಧನೆಯ ಮೂಲಕವೇ ಪರಮ ಸಿದ್ಧಿಯ ಪ್ರಾಪ್ತವಾಗುತ್ತದೆ ರೂಪ ಯೌವನದಿಂದ ಪ್ರಾಪ್ತವಾಗುವ ಸಾಂಸಾರಿಕ ಸುಖ ಈಶ್ವರ ಪ್ರಾಪ್ತಿಯ ಜ್ಞಾನಮಾರ್ಗದಲ್ಲಿ ಬಾಧೆ ಮತ್ತು ಅಡಚಣೆಯೇ ಹೊರತು ಇನ್ನೇನು ಇಲ್ಲ ಬಹುಶಃ ಈ ಕಾರಣದಿಂದಲೇ ಅವ್ವಯ್ಯಾರ್ ಸುಖ – ಭೋಗಗಳ ತ್ಯಾಗ ಮಾಡಿರಬಹುದು ತನ್ನ ಒಂದು ಗ್ರಂಥ – 'ನೀತಿ ನೇರಿ ವಳಕ್ಕಂ'ನಲ್ಲಿ – "ಯೌವ್ವನವೆಂಬುದು ನೀರಿನ ಬುರುಡೆಯಷ್ಟೇ ಧನ – ಸಂಪತ್ತು ಸಾಗರದ ಭೋರ್ಗರೆಯುವ ಅಲೆಗಳು, ಮತ್ತು ನಮ್ಮ ಈ ಕಾಯಕದ ಅಸ್ತಿತ್ವ ನೀರಿನ

ಹೀಗಿರುವಾಗ ನಾವೇಕೆ ಪರಮಾತ್ಮನ ಮಂದಿರಕ್ಕೆ ಹೋಗಿ ಪೂಜೆ, ಅರ್ಚನೆ ಮಾಡುವುದಿಲ್ಲ" ಎನ್ನುವಳು

ಪರ್ಯಟನೆ ಮಾಡುತ್ತಲಿದ್ದ ಅವ್ವಯ್ಯಾರ್‌ಗೆ ಒಮ್ಮೆ ಜೀವನದಲ್ಲಿ ಬಹಳ ಕಲಹಮಯವಾಗಿದ್ದ ಪತಿ - ಪತ್ನಿಯರ ಭೇಟಿಯಾಯ್ತು ಪತ್ನಿ - ಕರ್ಕಶಳು, ಪತಿ ಕೆಟ್ಟವ್ಯವಹಾರವುಳ್ಳವ ಅವ್ವಯ್ಯಾರ್ ಹಸಿದಿದ್ದಳು - ಪತಿಗೆ ಅವ್ವಯ್ಯಾರ್ ಮೇಲೆ ದಯೆಯುಂಟಾಯ್ತು ಆತ ಆಕೆಯನ್ನು ತನ್ನ ಮನೆಗೆ ಕರೆದೊಯ್ದ ಆದರೆ ಹಸಿದಿರುವ ಈ ವೃದ್ಧೆಗೆ ಊಟ - ಉಪಚಾರಮಾಡು ಎಂದು ಪತ್ನಿಗೆ ಹೇಳುವಷ್ಟು ಧೈರ್ಯವಿರಲಿಲ್ಲ

ಪತ್ನಿಯನ್ನು ತನ್ನ ಪ್ರೀತ್ಯಾದರದ ಮಾತುಗಳಿಂದ ಪೂಸಿ ಹೊಡೆದು, ಆಕೆ ಸ್ವಲ್ಪ ನಗುಮುಖಳಾದಾಗ ಆತ ನಿಧಾನವಾಗಿ ಅಕ್ಷರಗಳನ್ನು ಜೋಡಿಸಿ ತಾನು ಹಸಿದಿರುವ ವೃದ್ಧೆಯೊಬ್ಬಳನ್ನು ಉಟೋಪಚಾರಕ್ಕೆ ಕರೆ ತಂದಿರುವ ವಿಷಯವನ್ನು ಹೇಳಿದ ಅಷ್ಟೇ ಅವನ ಪತ್ನಿ ಕೋಪಾವೇಶತಾಳಿ ತನ್ನ ಕರ್ಕಶ ಧ್ವನಿಯಲ್ಲಿ ಪತಿಯನ್ನು ಬಾಯಿಗೆ ಬಂದ ಮಾತುಗಳಿಂದ ನಿಂದಿಸತೊಡಗಿದಳು ಇದನ್ನು ಕೇಳಲಾರದೆ ಅವ್ವಯ್ಯಾರ್ ಅಲ್ಲಿಂದ ಎದ್ದು ಮೌನವಾಗಿ ಹೊರಗೆ ಹೊರಟೇ ಹೋದಳು ಇದನ್ನರಿತ ಪತಿ ಹಿಂದಿರುಗಿ ಓಡಿ ಬಂದು ಆಕೆಯಲ್ಲಿ ಕ್ಷಮಯಾಚಿಸಿದ ಅವ್ವಯ್ಯಾರ್ ಸಹಾನುಭೂತಿಯಿಂದ "ಕರ್ಕಶವಾಣಿ - ಮೃದುವಾಣಿಯ ಜಯಗಳಿಸಲು ಸಾಧ್ಯವಿಲ್ಲ ಸಾಮಾನ್ಯವಾದ ಬಾಣವನ್ನು ಪ್ರಯೋತಾಕಿ ಕೆಳಗೆ ಬೀಳುತ್ತದಷ್ಟೆ" -ಎನ್ನುತ್ತಾಳೆ

ಅವ್ವಯ್ಯಾರ್ ಆ ವ್ಯಕ್ತಿಗೆ - "ದಾಂಪತ್ಯಜೀವನದಲ್ಲಿ ಸುಖ ಅವಶ್ಯಕ ಆದರೆ ಅದು ಸ್ನೇಹಮಯಿಾ, ಸೌಮ್ಯ ಮತ್ತು ಎಲ್ಲರೀತಿಯಲ್ಲೂ ಉಪಯುಕ್ತಳಾದ ಪತ್ನಿಯು ದೊರೆತರೆ ಮಾತ್ರ ಪಡೆಯಲು ಸಾಧ್ಯ ಅಂತಹ ಪತ್ನಿ ದೊರೆಯದಿದ್ದಲ್ಲಿ ದಾಂಪತ್ಯ ಜೀವನ ನರಕಯಾತನೆಗಿಂತಲೂ ಸಹಿಸಲಸಾಧ್ಯವಾಗುವುದು ಅಂಥ ಪರಿಸ್ಥಿತಿಯಲ್ಲಿ ಗೃಹವನ್ನು ತ್ಯಾಗಮಾಡಿ ಸನ್ಯಾಸಿಯಾಗುವುದೇ ಉತ್ತಮ" ವೆಂದು ಉಪದೇಶಿಸಿದಳು

ಹೀಗೆ ಮತ್ತೊಂದೆಡೆ ರೈತನೊಬ್ಬನ ಭೇಟಿಯಾಯ್ತು ಆತ ತನ್ನ ಹೊಲದ ಕೆಲಸದಲ್ಲಿ ತೊಡಗಿದ್ದ ಆತ ಕಷ್ಟಪಟ್ಟು ಕೆಲಸಮಾಡುತ್ತಲಿದ್ದ ಜತೆಗೆ ಆಸಕ್ತಿಯೂ ಇತ್ತು ಆತನ ಪತ್ನಿ ಸ್ನೇಹಮಯಿಾ ಮಹತ್ವಾಕಾಂಕ್ಷಿಯೂ ಆಗಿದ್ದಳು ಒಂದು ದಿನ ಅವಳು ತನ್ನ ಪತಿಗೆ ಹೊಲ - ಗದ್ದೆಯ ಕೆಲಸ ತೊರೆದು ಮಹಾರಾಜನ ಬಳಿಹೋಗಿ ಯಾವುದಾದರು ಕೆಲಸಕ್ಕೆ ಸೇರಿಕೊ ಅದರಿಂದ ನಮ್ಮ ಪರಮಾನ ಹೆಚ್ಚಾಗುವುದೆಂದು ಪ್ರೇರೇಪಿಸಿದಳು ಆದರೆ ರೈತ ಇದಕ್ಕೆ ಸಿದ್ಧನಾಗಿರಲಿಲ್ಲ ಪತಿ - ಪತ್ನಿಯರು ಅವ್ವಯ್ಯಾರ್ ಬಳಿ ಏಕೆ ಇದರ ಬಗ್ಗೆ ಸಲಹೆ ಕೇಳಬಾರದೆಂದು ಯೋಚಿಸಿ ಆಕೆಯ ಬಳಿ ಹೋದರು

ಅವ್ವಯ್ಯಾರ್ ಅವನ ಮಾತುಕೇಳಿ, "ನದಿಯ ದಡದಲ್ಲಿ ದೊಡ್ಡದಾಗಿ ಬೆಳೆದು ನಿಂತಿರುವ ವೃಕ್ಷವೂ ಹೀಗೇ ಎಂದು ಹೇಳಲು ಸಾಧ್ಯವಿಲ್ಲ ಅದೆರಡು ಯಾವಾಗ ಬೇಕಾದರೂ ನಷ್ಟವಾಗಬಹುದು 'ಕೃಷಿಯೇ' ಎಲ್ಲದಕ್ಕಿಂತಲು ಮಿಗಿಲಾದದ್ದು ಪ್ರಪಂಚದಲ್ಲಿ ಮತ್ಯಾವ ವೃತ್ತಿಗೂ ಇಷ್ಟು ಮಹತ್ವವಿರುವುದಿಲ್ಲ ಕೃಷಿಯಲ್ಲಿ ಮಹತ್ವ ಮಾತ್ರವಲ್ಲ ಸ್ವಾಧೀನತೆಯೂ ಇದೆ" ಎಂದು ವಿವರಿಸಿ ಹೇಳಿದ್ದಾಳೆ

ತಮಿಳು ನಾಡಿನ ವಿಭಿನ್ನ ಪ್ರದೇಶದ ರಾಜಮಹಾರಾಜರು ಆಕೆಗೆ ಆದರ ಸನ್ಮಾನ ನೀಡುತ್ತಲಿದ್ದರು ಆಕೆಯನ್ನು ದರ್ಬಾರ್ ಹಾಲ್‌ಗೆ ಬರಮಾಡಿ ಆಕೆಯ ಜ್ಞಾನ ಪೂರ್ಣ ಮಾತುಗಳಿಂದ ಧನ್ಯರಾಗುತ್ತಿದ್ದರು

"ಯುದ್ಧವೆಂಬುದು ರಾಜ ಮಹಾರಾಜರ ಮಹತ್ವಾಕಾಂಕ್ಷೆಯ ಕಾರಣವಾಗುತ್ತದೆ ಆದರೆ ಅದರ ಯಾತನೆ ಎರಡೂ (ಪಕ್ಷದ) ಕಡೆಯ ಜನಸಾಮಾನ್ಯರಲ್ಲಿ ಸಮಾನ ಭಾಗದಲ್ಲಿ(ರುತ್ತದೆ) ಅನುಭವಿಸಲ್ಪಡುತ್ತದೆ" ಎಂದು ಅವ್ವಯ್ಯಾರ್ ಯುದ್ಧದ ಭೀಷಣತೆಯನ್ನು ಸಜೀವವಾಗಿ ವರ್ಣಿಸಿದ್ದಾಳಲ್ಲದೆ ಜನರಿಗೆ ಶಾಂತಿ ಮಾರ್ಗದ ಉಪದೇಶವನ್ನು ನೀಡಿದ್ದಾಳೆ

ಅವ್ವಯ್ಯಾರ್ ಸದಾ ಕಾಲ ಸರಳ - ಸಾಮಾನ್ಯ - ಆಡಂಬರ ರಹಿತ ಜನರಲ್ಲೇ ಸಂಪರ್ಕ ಬೆಳೆಸಿ ಉಪದೇಶ ನೀಡುತ್ತಿದ್ದಳು ಅವರ ಸುಖ - ದುಃಖಗಳಲ್ಲಿ ಭಾಗಿಯಾಗುತ್ತಿದ್ದಳು

ಅನೇಕ ನೀತಿಯುಕ್ತ ಗ್ರಂಥಗಳನ್ನು ಆಕೆ ರಚಿಸಿದ್ದಾಳೆ ಅವುಗಳಲ್ಲಿ ನೀತಿಯು ಸೂಕ್ತಿಯ ರೂಪದಲ್ಲಿ ಅಥವಾ ಚತುಷ್ಪದಿಯಲ್ಲಿವೆ ಕೆಲವು ಉಪದೇಶಗಳು ಈ ರೀತಿ ಇವೆ - "ಕಳೆದು ಹೋದ ದಿನಗಳು ಬೆರಳೆಣಿಕೆಯಾಗುತ್ತವೆ ಮುಂಬರುವ ದಿನಗಳ ಬಗ್ಗೆ ಯಾರ ಬಳಿಯೂ ಯಾವುದೇ ರೀತಿಯ ಲೆಖ್ಖವಿರುವುದಿಲ್ಲ ದಿನಗಳುರುಳುತ್ತಲೇ ಇವೆ ಆದರೆ ನಾವು ಮಾತ್ರ ನಿಷ್ಠೆಯಿಂದ ಏನೂ ಮಾಡುತ್ತಿಲ್ಲ"

"ದಾನಿಗಿಂತ ಗುಣವಂತನಾರೂ ಇಲ್ಲ ತನ್ನ ವಿವೇಕದ ಚಿಂತನೆಗಿಂತ ಶುಭ ಚಿಂತನೆ ಮತ್ತೊಂದಿಲ್ಲ ಸ್ವಾಭಿಮಾನದಿಂದ ಜೀವನ ನಡೆಸುವುದಕ್ಕಿಂತ ಒಳ್ಳೆಯ ಆಚರಣೆ ಮತ್ತೊಂದಿಲ್ಲ ತಮ್ಮ ಆತ್ಮ ಪವಿತ್ರವಾಗಿರಬೇಕೆಂದು ಚಿಂತಿಸುವವರ ಸಿದ್ಧಾಂತ ಇದರ ಹೊರತು ಬೇರೊಂದಿಲ್ಲ"

# ಸಮರ್ಥ ರಾಮದಾಸರು

ವಿದ್ವಾನ್ ಭೀಮಾಚಾರ್ಯ ಗುಡಿ

ಚೈತ್ರಶುದ್ಧ ನವಮಿ (ಶ್ರೀರಾಮನವಮಿ), ಶಾ ಶಕ 1530, (ಕ್ರಿ ಶ 1608) ರಂದು ಗೋದಾವರಿ ತೀರದ ಜಂಭಂಗ್ರಾಮದಲ್ಲಿ ಸಮರ್ಥರಾಮದಾಸರ ಜನ್ಮವಾಯಿತು ಅವರ ಮೊದಲಿನ ಹೆಸರು ನಾರಾಯಣ ಎಂದಿತ್ತು ನಿಷ್ಠಾವಂತರಾದ ಋಗ್ವೇದಿ - ಜಮದಗ್ನಿ ಗೋತ್ರದ ಸೂರ್ಯಾಜಿ ವಂತ್, ಹಾಗೂ ರಾಣುಬಾಯಿ ಇವರ ತಂದೆ-ತಾಯಿಗಳು ಗಂಗಾಧರ ಹಾಗೂ ರಾಮಿರಾರಾಮದಾಸರು ಇವರ ಹಿರಿಯ ಅಣ್ಣಂದಿರು ಧರ್ಮಿಷ್ಠನಾದ ತಂದೆಯು ಸಕಾಲಕ್ಕೆ ಮಕ್ಕಳ ಉಪನಯನ ಮಾಡಿಸಿದನು

ಮಕ್ಕಳ ಚಿಕ್ಕವರಿರುವಾಗಲೆ ತಂದೆ ಸೂರ್ಯಾಜವಂತನು ಕಾಲವಶನಾದನು ಅನಾಥಮಕ್ಕಳ ಪಾಲನ ಪೋಷಣಭಾರವನ್ನು ತಾಯಿಯು ವಹಿಸಿಕೊಂಡಳು ಚಿಕ್ಕಂದಿನಿಂದಲೂ ಆಧ್ಯಾತ್ಮದ ಒಲವುಳ್ಳ ನಾರಾಯಣ (ರಾಮದಾಸ)ನು ತನ್ನ ಹನ್ನೆರಡನೆಯ ವಯಸ್ಸಿನಲ್ಲಿಯೇ ಮನೆ ಬಿಡಲು ಮನಸ್ಸು ಮಾಡಿದನು ಮಗನ ಕಲ್ಯಾಣಕ್ಕಾಗಿ ತಾಯಿಯು ಒಂದು ದಿನ ಮಗನನ್ನು ಹತ್ತಿರ ಕರೆದು, ಆತನಿಗೆ ಮದುವೆಯಾಗಲು ಒತ್ತಾಯಿಸಿದಳು ಸಂಸಾರದಿಂದ ದೂರವಿರಲು ಹಾತೊರೆಯುತ್ತಿರುವ ಬಾಲಕನಿಗೆ ಮನಸ್ಸಿಲ್ಲದಿದ್ದರೂ ತಾಯಿಯ ಒತ್ತಾಯಕ್ಕಾಗಿ ಒಪ್ಪಿಕೊಳ್ಳಬೇಕಾಯಿತು ಹಿರಿಯರಾದ ಆಪ್ತೇಷ್ಟರ ಸಂಭ್ರಮದಿಂದ ಮದುವೆಯ ಸಿದ್ಧತೆ ನಡೆಯಿತು ಆದರೆ ಚಿಕ್ಕವನಾದ ರಾಮದಾಸನು ಮಾತ್ರ ಅಂತರಂಗದಲ್ಲಿ ಪರಮಾತ್ಮನನ್ನು ಧ್ಯಾನಿಸುತ್ತ ನಿರ್ಲಿಪ್ತನಾಗಿದ್ದನು ಸುಂದರವಾದ ಮದುವೆಯ ಮಂಟಪ ಸಿದ್ಧವಾಗಿದೆ ಜಂಭಂ ಮತ್ತು ಆಸನಗಾವ ಮನೆತನಗಳ ಬೀಗರ ದಿಬ್ಬಣ ಅಲ್ಲಿ ಕೂಡಿದೆ ಆಸನಗಾಂವದ ಬಾನಾಜಿ ಬುವಾನ ಮಗಳು ಸಣ್ಣವಯಸ್ಸಿನವಳು ವಧುವು 12 ವರ್ಷದ ನಾರಾಯಣನಿಗೆ ಅವಳನ್ನು ಗೊತ್ತು ಮಾಡಲಾಗಿತ್ತು ಪುರೋಹಿತರು ಮದುಮಕ್ಕಳನ್ನು ವಿವಾಹ ಮಂಟಪಕ್ಕೆ ಕರೆತಂದಿದ್ದಾರೆ, ಅಂತರಪಟದ ಎದುರು ನಿಂತಿದ್ದಾರೆ, ಮಂಗಳಾಷ್ಟಕಗಳನ್ನು ಹೇಳಹತ್ತಿದ್ದಾರೆ 'ಸುಲಗ್ನಾ ಸಾವಧಾನ' ಸುಮುಹೂರ್ತೇ ಸಾವಧಾನ' ಎಂಬ ಮಂತ್ರಗಳು ನಾರಾಯಣನ ಮನಸ್ಸನ್ನು ಕಲಕಿದವು ಇದೇಸರಿಯಾದ ಸಮಯವೆಂದು ಹೇಳಿದವನೇ, ಅಲ್ಲಿಂದ ಹೊರಗೆ ಜಿಗಿದು ನಾಗಾಲೋಟದಿಂದ ಓಡಹತ್ತಿದನು, ಮದುವೆಯ ಮಂಟಪದಿಂದ ದೂರವಾದನು ಹೀಗೆ ರಾಮದಾಸನು ತಾಯಿಗೆ ಕೊಟ್ಟ ಮಾತನ್ನು ಪಾಲಿಸಿದಂತೆ ಮಾಡಿದರೂ ತನ್ನ ನಿರ್ಧಾರವನ್ನು ಮಾತ್ರ ಬಿಡಲಿಲ್ಲ

ಹಿರಿಯ ಅಣ್ಣನಾದ ಗಂಗಾಧರ ಪಂತನು ತಮ್ಮ ನಾರಾಯಣನಿಗೆ ಉಪದೇಶಕೊಡಲು ನಿರಾಕರಿಸಿದ್ದರಿಂದ ಅವನು ಮನೆಬಿಟ್ಟು ಹೋದನು ಎಂದು ಕೆಲವರು ಹೇಳುತ್ತಾರೆ ಏನೇ ಇರಲಿ, ಅವನು ಗೃಹತ್ಯಾಗಮಾಡಿ, ಪಂಚವಟಿಗೆ ಬಂದನು ಗೋದಾವರಿಯ ಉಪನದಿಯ ಹತ್ತಿರ 'ತಕಲಿ' ಎಂಬ ಬೆಟ್ಟದ ಗುಹೆಯಲ್ಲಿ ವಾಸಿಪಾದನು ಹನ್ನೆರದು ವರ್ಷ ಗುಹೆಯಲ್ಲಿದ್ದುಕೊಂಡು ತೀವ್ರ ತಪಸ್ಸು ಮಾಡಿದನು ನದುನೀರಿನಲ್ಲಿ ನಿಂತುಕೊಂಡು ರಘುನಾಥನ ಧ್ಯಾನಮಾಡುತ್ತಿದ್ದನು ನಾಶಿಕದ ಹತ್ತಿರ 'ತಕಲಿ' ಯಲ್ಲಿ ಗಾಯತ್ರಿ ಮತ್ತು ರಾಮ ಮಂತ್ರ ಪುರಶ್ಚರಣ ಮಾಡುತ್ತಿದ್ದನು ಮದುಕರ ವೃತ್ತಿಯನ್ನಾಚರಿಸುತ್ತ ಕೀರ್ತನೆ, ಭಜನೆಗಳಲ್ಲಿ ವೇಳೆಕಳೆಯುತ್ತಿರುವಾಗ ಶ್ರೀರಾಮನ ದರ್ಶನಪಡೆದನು ಪ್ರತ್ಯಕ್ಷನಾದ ದೇವರು ಅವನಿಗೆ ದೀಕ್ಷೆ ಕೊಟ್ಟರು ಇದೇ ವಿಷಯವನ್ನು ರಾಮದಾಸರು 'ದಾಸಬೋಧ'ದಲ್ಲಿ ಹೀಗೆ ಹೇಳಿದ್ದಾರೆ

ಸಾಹ್ಯ ಆಮ್ಹಾಂಸಿ ಹನುಮಂತ  
ಆರಾಧ್ಯದೈವತ ಶ್ರೀರಘುನಾಥ  
ಗುರು ಶ್ರೀರಾಮ ಸಮರ್ಥ  
ಕಾಮ ಉಣೆದಾಸಾಸೆ  
ದಾತಾ ಏಕ ರಘುನಂದನ ||

ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡ ರಾಮದಾಸನು ವ್ಯಕ್ತಿತ್ವವನ್ನು ಬೆಳಗಿಸಿಕೊಂಡು ಜನಹಿತದ ದೃಷ್ಟಿಯಿಂದ ತೀರ್ಥಯಾಟನೆ ಮಾಡಲು ಮನಸ್ಸುಮಾಡಿದನು 1632 ರಿಂದ ಹನ್ನೆರಡು ವರ್ಷದ ತೀರ್ಥಯಾತ್ರೆಯಲ್ಲಿ ಹನ್ನೆರಡು ಜ್ಯೋತಿರ್ಲಿಂಗಗಳ ದರ್ಶನಮಾಡಿದನು ಅನೇಕ ಪುಣ್ಯನಗರಿಗಳಲ್ಲಿ ವಾಸಮಾಡಿದರು ತೀರ್ಥಯಾತ್ರೆ ಮಾಡುತ್ತ ಕ್ರಿಶ 1644 ಕ್ಕೆ ಕೃಷ್ಣಾತೀರಕ್ಕೆ ಬಂದು ಅಲ್ಲಿಯೇ ನೆಲೆನಿಂತನು ಕೃಷ್ಣಾತೀರದ (ಅಂಗನಪುರದ ಹತ್ತಿರ) ಆಳವಾದ ನೀರಿನಲ್ಲಿ ಮುಳುಗಿ ಶ್ರೀರಾಮ ವಿಗ್ರಹವನ್ನು ಎತ್ತಿತಂದು ಚವಳಗಾವದಲ್ಲಿ ಸ್ಥಾಪಿಸಿ, ಪೂಜಿಸಹತ್ತಿದನು ಕ್ರಿಸ್ತಾಬ್ದ 1649 ವೈಶಾಖಶುದ್ಧ ನವಮಿಯ ದಿನ ಸಿಂಗನವಾಡಿಯಲ್ಲಿ ರಾಮದಾಸರು ಛತ್ರಪತಿ ಶಿವಾಜಿ ಮಹಾರಾಜರಿಗೆ ದೀಕ್ಷೆಕೊಟ್ಟರು ಕ್ರಿಶ 1649 ರ ಆಷಾಢತಿಂಗಳಲ್ಲಿ ಪಂಢರಪುರಕ್ಕೆ ಹೋಗಿ, ಪಂಢರಿನಾಥನ ಹಾಗೂ ಹಿರಿಯಸಂತ ತುಕಾರಾಮರ ದರ್ಶನ ಪಡೆದರು 1650 ರಲ್ಲಿ ರಾಮದಾಸರು ಪರೇಲಿಗೆ ಆಗಮಿಸಿದರು ಕ್ರಿಶ 1655 ರಲ್ಲಿ ಛತ್ರಪತಿ ಶಿವಾಜಿ ಮಹಾರಾಜರು ತಮ್ಮ ಎಲ್ಲ ರಾಜ್ಯವನ್ನು ಅರ್ಪಣಮಾಡಿದ್ದರು ರಾಮದಾಸರು ಸ್ವಗ್ರಾಮವಾದ ಜಂಭಕ್ಕೆ ಹೋಗಿ ತಾಯಿಯ ಅಂತ್ಯದರ್ಶನ ಪಡೆದರು ಅಲ್ಲಿಂದ ಸಜ್ಜನಗಡಕ್ಕೆ ಬಂದು ಒಂದು ಪರೆವರ್ಷ ಇದ್ದು ಬಡಬಗ್ಗರಿಗೆ ಊಟಹಾಕಿದರು ಅದೇ ವರ್ಷ ಚಳಿಗಾಲದಲ್ಲಿ ಮಲೇರಿಯಾದಿಂದ ಪೀಡಿತರಾಗಿ ಚಾಪಳನಗರಕ್ಕೆ ಪ್ರಯಾಣ ಬೆಳೆಸಿದರು ಕ್ರಿಸ್ತಾಬ್ದ 1678ರಲ್ಲಿ ರಾಮದಾಸರು ತಂಜಾವೂರಿನಲ್ಲಿ ತಯಾರಾದ ರಾಮ, ಲಕ್ಷ್ಮಣ, ಸೀತೆಯರ ವಿಗ್ರಹಗಳನ್ನು ತರಿಸಿ ಪ್ರತಿಷ್ಠಾಪಿಸಿದರು ದುಮಗಾವ ಮಠದ ಅಧಿಕಾರವನ್ನು ಶಿಷ್ಯಕಲ್ಯಾಣಗೆ ವಹಿಸಿಕೊಟ್ಟರು

ಕ್ರಿಶ 1679 ರಲ್ಲಿ ಶಿವಾಜಿ ಮಹಾರಾಜರು ಸಂತರಾಮದಾಸರ ದರ್ಶನಕ್ಕೆ ಬಂದರು ಶಿವಾಜಿಯ ಮರಣದ ನಂತರ ಸಂಭಾಜಿಯು ರಾಮಚಂದ್ರ ಪಂತನೆಂಬ ಸಚಿವನೊಡನೆ ಸಮರ್ಥರ ದರ್ಶನಕ್ಕೆ ಬಂದನು ಅಲ್ಲಿ ಎಂಟುದಿನ ಇದ್ದು ತನ್ನ ರಾಜ್ಯಕ್ಕೆ ಮರಳಿದನು ಕ್ರಿಶ 1681 ಮಾಘ ಕೃಷ್ಣಪಂಚಮಿಯಂದು ತಂಜಾವೂರಿನಿಂದ




# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

### ಆಲಯ ಕಾರ್ಯಕ್ರಮ.

| | | |
|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ | 5–30 ಗಂಟೆಗೆ |
| (ರೂ 6–00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ) | | |
| 1 ನೇ ಗಂಟೆ | ಬೆಳಗ್ಗೆ | 6–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 6–30 ಗಂಟೆಗೆ |
| ಶುದ್ಧಿ 2 ನೇ ಗಂಟೆ | ಬೆಳಗ್ಗೆ | 11–30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ | 12–00 ಗಂಟೆಗೆ |
| 3 ನೇ ಗಂಟೆ | ಸಂಜೆ | 6–00 ಗಂಟೆಗೆ |
| ಸರ್ವದರ್ಶನ | ಸಂಜೆ | 6–30 ಗಂಟೆಗೆ |
| ಶುದ್ಧಿ | ರಾತ್ರಿ | 8–45 ಗಂಟೆಗೆ |
| ಏಕಾಂತ | ರಾತ್ರಿ | 9–00 ಗಂಟೆಗೆ |

### ಶುಕ್ರವಾರಗಳಲ್ಲಿ

| | | |
|---|---|---|
| ಅಭಿಷೇಕ | ಬೆಳಗ್ಗೆ | 9–00 ಗಂಟೆಗೆ |
| (ರೂ 100/– ಶುಲ್ಕದಿಂದ ಒಬ್ಬರಿಗೆ ಪ್ರವೇಶ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/-) | | |
| ಎರಡನೇ ಗಂಟೆ | ಬೆಳಗ್ಗೆ | 11–00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ | 11–30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ | 7–00 ಗಂಟೆಗೆ |
| (ಮುಖರ ಮಂಟಪದಲ್ಲಿ, ಶುಲ್ಕ ರೂ 150/–) | | |
| (5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು.) | | |
| 3 ನೇ ಗಂಟೆ | ರಾತ್ರಿ | 8–00 ಗಂಟೆಗೆ |
| ಸರ್ವದರ್ಶನ | ರಾತ್ರಿ | 8–30 ಗಂಟೆಗೆ |
| ಶುದ್ಧಿ | ರಾತ್ರಿ | 9–30 ಗಂಟೆಗೆ |
| ಏಕಾಂತಸೇವೆ | ರಾತ್ರಿ | 9–45 ಗಂಟೆಗೆ. |

ಪೇಷ್ಕಾರ್.

ತರಿಸಿದ ವಿಗ್ರಹಗಳನ್ನು ಸಜ್ಜನಗಡದಲ್ಲಿ ಸ್ಥಾಪಿಸಲಾಯಿತು ಅದಾದ ನಾಲ್ಕುದಿನಗಳ ನಂತರ ಪರಮಾತ್ಮನಲ್ಲಿ ಧ್ಯಾನಾಸಕ್ತರಾದರು, ದೇಹತ್ಯಾಗ ಮಾಡಿದರು (ಮಾಘ ಕೃಷ್ಣ ನವಮಿ 1681)

## ಶಿವಾಜಿ ಮತ್ತು ರಾಮದಾಸರ ಸಮಾಗಮ

ಸಮರ್ಥ ರಾಮದಾಸರು ಛತ್ರಪತಿ ಶಿವಾಜಿ ಮಹಾರಾಜರಿಗೆ ದೈವಿಕ ಗುರುವಾಗಿದ್ದರು ಎಂಬ ಸಂಗತಿ ಜಗದ್ವಿಖ್ಯಾತವಾಗಿದೆ ಶಿವಾಜಿಯು ರಾಮದಾಸರನ್ನು ಮೊದಲನೆಯ ಸಲ ಭೆಟ್ಟಿಯಾದದ್ದು (ಕ್ರಿ ಶ 1649) ಸಿಂಗನವಾಡಿ ಉದ್ಯಾನದಲ್ಲಿ ಚಪಳಗಾವದಲ್ಲಿ ರಾಮಮೂರ್ತಿಗಳನ್ನು ಪ್ರತಿಷ್ಠಾಪಿಸುವ ಪೂರ್ವದಲ್ಲಿ ಭೆಟ್ಟಿಯಾಗಿದ್ದು ಶಿವಾಜಿ ದೇವಾಲಯದ ಕಟ್ಟಡಕ್ಕಾಗಿ ಕಾಣಿಕೆಕೊಟ್ಟನು ಮುಂದೆ ಕೆಲವು ವರ್ಷಗಳ ನಂತರ ಶಿವಾಜಿಯು ತನ್ನ ಸಂಪೂರ್ಣ ರಾಜ್ಯವನ್ನು ಗುರುಗಳಿಗೆ ಅರ್ಪಿಸಿ ಮರಳಿ ಪಡೆದನು ಮಹಾರಾಷ್ಟ್ರದ ಇತಿಹಾಸದಲ್ಲಿ ಮಹತ್ವದ ಸಂಗತಿಯೆಂದರೆ – ಕ್ರಿ ಶ 1649 ರಲ್ಲಿ ಸದ್ಗುರು ರಾಮದಾಸರು ಶಿವಾಜಿಗೆ ಗುರೂಪದೇಶ (ದೀಕ್ಷೆ) ಕೊಟ್ಟದ್ದು ಅಂದಿನಿಂದ ರಾಮದಾಸರು ಶಿವಾಜಿ ಮಹಾರಾಜರಿಗೆ ದೀಕ್ಷಾಗುರುಗಳಾದರು ಶಿವಾಜಿಯು ತನ್ನ ರಾಜಕಾರಣದಲ್ಲಿ ರಾಮದಾಸರ ಸೂಕ್ತಸಲಹೆಗಳನ್ನು ಪಡೆಯುತ್ತಿದ್ದನು

## ರಾಮದಾಸರ ಕೃತಿಗಳು

ರಾಮದಾಸರ ಕೃತಿಗಳಲ್ಲಿ ದಾಸಬೋಧವು ಅತ್ಯಂತ ಪ್ರಧಾನವಾದ ಕೃತಿಯು ಇದರಲ್ಲಿ ಆಧ್ಯಾತ್ಮದ ಮೇಲ್ಮಟ್ಟವನ್ನು ಮುಟ್ಟಿದ ರಾಮದಾಸರ ದೈವಿಕ ಅನುಭವಗಳ ಸಂಪೂರ್ಣ ಸಾರವಿದೆ ಇದು ಗದ್ಯಾತ್ಮಕವಾಗಿದ್ದರೂ ರಸಪ್ರಧಾನವಾಗಿದೆ ಇದರಲ್ಲಿ ಸದ್ಭಾವನೆಗಳ ಬುಗ್ಗೆಗಳಿವೆ ಇದಲ್ಲದೆ ಇವರೇ ರಚಿಸಿದ ಕರುಣಾಷ್ಟಕ, ಮನಾಚೆಶ್ಲೋಕ, ಜನಸ್ವಭಾವಗೋದಾವಿ ಮೊದಲಾದ ಕೃತಿಗಳು ಮಹತ್ವದ್ದಾಗಿವೆ ಗುರುಗಳ ಬಗ್ಗೆ ಹೇಳುವಾಗ ಅನೇಕರು ಅವರ ಚಮತ್ಕೃತಿಗಳನ್ನು ವರ್ಣಿಸುವರು ಈ ಚಮತ್ಕೃತಿಗಳು ದೈವಿಕ ಸತ್ಯಸಂಗತಿಗಳಲ್ಲ, ಅವರ ದೈವಿಕ ಪ್ರಭಾವವನ್ನು ಬೀರುವುದಿಲ್ಲ ಅದಕ್ಕಾಗಿ ಸಮರ್ಥರಾಮದಾಸರ ಆತ್ಮಜ್ಞಾನವನ್ನು ಅರಿತುಕೊಳ್ಳುವುದರಲ್ಲಿಯೆ ದೈವಿಕ ಹಿರಿತನವಿದೆ ಆತ್ಮಜ್ಞಾನವೇ ದೈವಿಕ ಹಿರಿತನದ ಸಂಕೇತವೆಂದು ಸಾರಿ ಹೇಳಿದ್ದಾರೆ

ನ್ಯಾಯ ಮತ್ತು ಧರ್ಮಗಳ ಉದ್ಧಾರಕ್ಕಾಗಿ, ಧರ್ಮಾತೀತವಾದ ಸರಕಾರವನ್ನು ಎತ್ತಿಹಿಡಿಯು ವುದಕ್ಕಾಗಿ, ಜನರಿಗೆ ಧರ್ಮದ ಮೂಲತತ್ವಗ ಳನ್ನು, ನೀತಿಯನ್ನು ಬೋಧಿಸುವುದಕ್ಕಾಗಿ, ಶಾಂತಿ ಯಿಂದ ಕೂಡಿದ ಸಮಾಜ ನಿರ್ಮಾಣವಾಗ ಬೇಕು ಇಂತಹ ಸಮಾಜವನ್ನು ಕಟ್ಟಲು ಅನೇಕ ಮಠ ಮಂದಿರಗಳು ನಿರ್ಮಾಣವಾಗಬೇಕು ಎಂಬ ಉದ್ದೇಶದಿಂದ ತಮ್ಮ ಭಾರತದ ತೀರ್ಥಯಾತ್ರೆ ಸಂಚಾರದಲ್ಲಿ ಈ ಕಾರ್ಯ ಕೈಕೊಂಡರು ಶಿಷ್ಯ ನೊಬ್ಬನನ್ನು ಕರೆದು ಮಹಾಬಳೇಶ್ವರದಲ್ಲಿರುವ ನದಿಯ ಮೂಲಸ್ಥಾನದಲ್ಲಿ 'ಹನುಮಾನ್ ದೇವಾ ಲಯ'ವನ್ನು ಕಟ್ಟಿಸಿದರು ಆಮೇಲೆ ದಿವಾಕರ್ ಮತ್ತು ಮಹಾಬಲೇಶ್ವರ್ ಎಂಬ ಅಣ್ಣತಮ್ಮಂದಿ ರರ ಆಗ್ರಹದ ಮೇರೆಗೆ ವಾಯಿನಗರಿಗೆ ಬಂದರು ನದಿಯ ದಕ್ಷಿಣ ಘಟ್ಟಗಳಲ್ಲಿ ಸಿದ್ಧಾಂತವಾಡಿ ಯಲ್ಲಿ ಮಾರುತಿಗುಡಿಯನ್ನು ಸ್ಥಾಪಿಸಿದರು ಜರಂ ದರಕ್ಕೆ ಹೋಗಿ ವಾರಕರಿಪಂಥದ ಸಂತರನ್ನು ಭೆಟ್ಟಿಯಾದರು ದಾರಿಯಲ್ಲಿ ಜನರಿಗೆ ಬೋಧ ನೆಮಾಡಿ ಸೋಮಾರಿತನ ನಿರಾಶಾಭಾವನೆಗಳನ್ನು ನಿವಾರಿಸಿ ಹೊಸ ಚೈತನ್ಯ ಎಬ್ಬಿಸಿದರು ರಾಮ ದಾಸರು ಧರ್ಮಪ್ರಚಾರದ ಕಾರ್ಯವನ್ನು ಮಿಷ ನರಿ ಉತ್ಸಾಹದಿಂದ ಮಾಡಿದರು ಸಮಾಜಸುಧಾ ರಣೆಯೇ ಅವರ ಗುರಿಯಾಗಿದ್ದಿತು ಅಸಂಖ್ಯಾತ ಶಿಷ್ಯರನ್ನು ನೇರಿಸಿದರು ಕರಹಜ, ಷಾಹಪುರ, ಮಿರಜ, ಚವಲ, ಶಿರಗಾವ, ಮಸೂರ ಮೊದ ಲಾದ ಕಡೆಗಳಲ್ಲಿ ಸಂಘ ಸಂಸ್ಥೆಗಳನ್ನು ಕಟ್ಟಿಸಿ ದರು ಮಠಗಳನ್ನು ನಿರ್ಮಿಸಿದರು ದೇವಸ್ಥಾನಗ ಳನ್ನು ಸ್ಥಾಪಿಸಿದರು ಈ ರೀತಿಯಾದ ಧಾರ್ಮಿ ಕಕಾರ್ಯಗಳಿಂದ ಅವರ ಶಿಷ್ಯವೃಂದವು ಬೆಳೆಯ ಹತ್ತಿತ್ತು ರಾಮದಾಸರು ಶಿರಗಾವ ಮತ್ತು ಚವ ಲಗಳಲ್ಲಿ ಮುಖ್ಯಮಠಗಳನ್ನು ಸ್ಥಾಪಿಸಿದರು ಶಿಷ್ಯ ನಾದ ಉದ್ಧವನನ್ನು ಬರಮಾಡಿಕೊಂಡು, ಅವ ನನ್ನು ಚೊಮಗಾವಮಠದ ಮುಖ್ಯಸ್ಥನನ್ನಾಗಿಮಾ ಡಿದರು ಅವರ ವಿಶ್ವಾಸಕ ಶಿಷ್ಯ ಕಲ್ಯಾಣಿ ಮತ್ತು ಮಿತ್ರ ದತ್ತಾತ್ರೇಯರು ಶಿರಗಾವಮಠವನ್ನು ನಡೆ ಸುತ್ತಿದ್ದರು ಅವರಿಗೆ ಬೇರೆ ಕಡೆಗಳಲ್ಲಿ ಗುಡಿಗ ಳನ್ನು ಮಠಗಳನ್ನು ಕಟ್ಟಿಸಿಕೊಟ್ಟರು ಕಲ್ಯಾಣನು 1678 ರಿಂದ 1714 ರವರೆಗೆ ದೋಮಗಾವ ಮಠದ ಹಿರಿತನವನ್ನು ವಹಿಸಿದ್ದನು ಗುರುರಾಮ ದಾಸ ನಿರ್ಮಾಣದ ನಂತರ ಅವರ ಅಸ್ಥಿಗಳನ್ನು ಕಾಶಿಯಲ್ಲಿ ವಿಸರ್ಜಿಸುವುದಕ್ಕಾಗಿ ಸಜ್ಜನಗಡದಿಂದ ತೆಗೆದುಕೊಂಡು ಹೋಗುತ್ತಿದ್ದರು ಅಷ್ಟರಲ್ಲಿ ಕಲ್ಯಾ ಣನ ಕಾಲವಾಗಿತ್ತು ಗುರುಶಿಷ್ಯರ ಅಸ್ಥಿಗಳನ್ನು ಒಟ್ಟಿಗೆ ತೆಗೆದುಕೊಂಡು ಹೋದದ್ದು ಅಪೂರ್ವ ಸಂಗತಿಯೆನ್ನಬೇಕು ರಾಮದಾಸ ಮತ್ತು ಶಿವಾಜಿ ಮಹಾರಾಜರರು ಆದರ್ಶ ಜೋಡಿಯಾಗಿದ್ದಿತು ರಾಮದಾಸರು ಜ್ಞಾನಿ, ಮುಖಂಡ, ಮುತ್ಸದ್ದಿ ಯಾಗಿದ್ದರೆ, ಶಿವಾಜಿ ಮಹಾರಾಜರು ಯೋಧ, ರಾಜಕಾರಣಿ, ಆಡಳಿತಗಾರನಾಗಿದ್ದ ಶಿವಾಜಿಯು 1661ರಲ್ಲಿ ಪ್ರತಾಪಗಢ ಕೋಟೆಯನ್ನು ಕಟ್ಟಿಸಿದ ಅಲ್ಲಿ ತನ್ನ ಗುರುಗಳಾದ ರಾಮದಾಸರಿಂದ ತುಳ ಜಾಭವಾನಿ ದೇವಿಯ ಪ್ರತಿಷ್ಠಾನೆ ಮಾಡಿಸಿದ ರಾಮದಾಸರು, 'ರಾಜನ ಕಾರ್ಯಗಳನ್ನು ಫಲ ಪ್ರದವಾಗಿ ಮಾಡು' ಎಂದು ಪ್ರಾರ್ಥನೆ ಸಲ್ಲಿಸು ತ್ತಿದ್ದರು ಒಮ್ಮೆ ಸಾನಗಢ ಕೋಟೆಯನ್ನು ಕಟ್ಟು ವಾಗ ಶಿವಾಜಿಗೆ ಗರ್ವಬಂದಿತು ರಾಮದಾಸರು ರಾಜನ ಭಾವನೆಯನ್ನು ಗ್ರಹಿಸಿದರು ಅವರು ಶಿವಾಜಿಗೆ ಒಂದು ವಿಚಿತ್ರವನ್ನು ತೋರಿಸಿದರು ಕೆಲಸಗಾರರು ಕೂಡಿಹಾಕಿದ ಕಲ್ಲುಗಳಲ್ಲಿ ಒಂದನ್ನು ಆರಿಸಿ, ಅದನ್ನು ಒಡೆಯಲು ರಾಮದಾಸರು ಹೇಳಿ ದರು ನೋಡಿದವರಿಗೆಲ್ಲಾ ಆಶ್ಚರ್ಯವಾಯಿತು ಆ ಕಲ್ಲಿನೊಳಗೆ ಸ್ವಲ್ಪನೀರು, ಒಂದು ಕಪ್ಪೆಯಿ ದ್ದಿತು ಬಂದೀಖಾನೆಯಿಂದ ತಪ್ಪಿಸಿಕೊಂಡ ಖೈದಿ ಯಂತೆ ಆ ಕಪ್ಪೆ ಓಡಿಹೋಯಿತು ಕಲ್ಲೊಳಗೆ ಪುಟ್ಟ ಕೂಗುವ ಕಪ್ಪೆಗಳಿಗೆಲ್ಲ ಆಹಾರವಿತ್ತು ಪೊರೆ ವವನು ಪರಮಾತ್ಮನು ಎಂಬ ಮಾತಿನ ನಿದರ್ಶ ನವಾಯಿತು ದೇವರು ಒಬ್ಬನೇ ಕರ್ತಾ, ಮಹಾ ರಾಜನು ಅವನ ಸೇವಕನು ಎಂದು ಹೇಳಿದಂತಾ ಯಿತು

ಸಂತರ ಆಲೋಚನೆಗಳು, ಆದರ್ಶಗಳು ಇವರ ಮುಖ್ಯ ಕೃತಿಯಾದ ದಾಸಬೋಧದಲ್ಲಿ ಅಭಿವ್ಯಕ್ತವಾಗಿದೆ ಸಾಧಕನ ಸಾಧನೆಯ ವಿಷ ಯವೂ ಕೂಡ ಇದರಲ್ಲಿದೆ ದಾಸಬೋಧವು ಸಮರ್ಥರಾಮದಾಸರ ಸಂಪ್ರದಾಯಗಳ ಚರಿತ್ರೆ ಯನ್ನು ಬಿತ್ತರಿಸುವ ಆತ್ಮಚರಿತ್ರೆಯಾಗಿದೆ ಸಂತರ ಚರಿತ್ರೆ ಹಾಗೂ ತಾತ್ವಿಕ ವಿಚಾರಗಳ ಐತಿಹಾ ಸಿಕ ಗ್ರಂಥವಾಗಿದೆ ತುಕಾರಾಮರ ಗಾದೆಗಳಿಂದ ಅವನ ಆತ್ಮಚರಿತ್ರವು ವ್ಯಕ್ತವಾಗುವಂತೆ, ದಾಸ ಬೋಧದಿಂದ ರಾಮದಾಸರ ಆತ್ಮಚರಿತ್ರವು ಬೆಳ ಗುತ್ತದೆ ಎಂಬುದು ಸತ್ಯ

ಲೋಕಂ ಲೋಕವಾಥವಿಲೆ
ತೇಣೆ ಅಮರ್ಯಾದಾಜಾಲೆ
ಭೂಮಂಡಳೀರಿ ಸತ್ತಾ ಚಾಲೆ ಗುಪ್ತರೂಪೆ ||

ಶ್ರೀಸಮರ್ಥರ ಸಾಮರ್ಥ್ಯವು ಇದರಲ್ಲಿದೆ ಮಹಾರಾಷ್ಟ್ರದ ಜನತೆಯನ್ನು ಒಟ್ಟುಗೂಡಿಸಿತರು, ಒಂದೇ ಇಚ್ಛೆಯಿಂದ ರಾಷ್ಟ್ರವನ್ನು ಉದ್ದೀಪನ ಗೊಳಿಸಿದರು ಮಹಾರಾಷ್ಟ್ರದ ಜನತೆಯ ಗುರಿ ಏನು ಎಂಬುದನ್ನು ಹೇಳಿಕೊಟ್ಟರು ಸಂಘಟ ನೆಯೇ ಸಾಮರ್ಥ್ಯದ ಮೂಲ ಎಂಬ ತತ್ವಕ್ಕೆ ಶ್ರೀ ಸಮರ್ಥ ರಾಮದಾಸರ ಜೀವನ ಚರಿತ್ರ ನಿದರ್ಶ ನವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು

ಶ್ರೀರಾಮದಾಸರಿಗ ಸಮರ್ಥ'ರು ಎಂದು ಏಕ ಕರೆಯುತ್ತಾರೆ, ಎಂಬುದಕ್ಕೆ ಅನೇಕ ಉತ್ತರಗಳಿವೆ ದಾಸಪಂಚಾಯತನದಲ್ಲಿ ಎಲ್ಲರಿಗಿಂತಲೂ ಹಿರಿಯ ರಾಗಿದ್ದರು ಎಂದು ಕೆಲವರು ಹೇಳುತ್ತಾರೆ ಮತ್ತೆ ಕೆಲವರು, ಇವರು ಭಿಕ್ಷೆಗೆ ಹೊರಟಾಗ 'ಜಯ ಜಯ ರಘುವೀರ ಸಮರ್ಥ ಎಂದು ಘೋಷಣೆ ಮಾಡುತ್ತಿದ್ದರಂತೆ ಅದಕ್ಕಾಗಿ ಅವ ರಿಗೆ ಜನರು 'ಸಮರ್ಥ' ಎಂದು ಕರೆಯತೊಡ ಗಿದರು 'ಸಮರ್ಥ ಪದವಿ'ಯು ಯಾರಿಗೆ ಪ್ರಾಪ್ತ ವಾಗುತ್ತದೆ ಎಂಬುದರ ಬಗ್ಗೆ ದಾಸಬೋಧದಲ್ಲಿ ಹೀಗೆ ಹೇಳಿದ್ದಾರೆ ರಾಮದಾಸರೇ 'ಸಮರ್ಥ' ಪದದ ಉಪಪತ್ತಿಯನ್ನು ಕೊಟ್ಟಿರುವಾಗ ಇನ್ನೊ ಬ್ಬರ ದೃಷ್ಟಾಂತ ಏಕೆ?

ಜಿತುಕೆ ಕಾಂಟ ಉತ್ತಮ ಗುಣ
ತೇ ಸಮರ್ಥಾಚೆ ಲಕ್ಷಣ ||

(ಹೆಚ್ಚು ಉತ್ತಮಗುಣಗಳಿಂದ ಕೂಡಿರುವುದು ಸಮರ್ಥನ ಲಕ್ಷಣವು)

ಬಹುತ ಜನಾಂಸ ಚಾಲವೀ
ನಾನಾ ಮಂಡಳೇ ಹಾಲವೀ
ಐಸಿಹೇ ಸಮರ್ಥ ಪದವೀ
ವಿವೇಕೆ ಹೋತೇ ||

ಸಮಾಜದ ಸುಖದುಃಖಗಳ ಸೂತ್ರವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಎಲ್ಲ ಸಮಾಜವನ್ನು ಯಾವನು ನಡೆಸುತ್ತಾನೆಯೋ, ಕಾರ್ಯ ಪ್ರವೃತ್ತರ ನ್ನಾಗಿ ಮಾಡುತ್ತಾನೆಯೋ, ಸನ್ಮಾರ್ಗದಲ್ಲಿ ತಂದು ಬಿಡುತ್ತಾನೆಯೋ ಅವನೇ ಸಮರ್ಥನು ಸಮರ್ಥ ಪದವಿ ಅವನಿಗೇ ಸಲ್ಲುವುದು ಶ್ರೀರಾಮದಾ ಸರು ಉಪದೇಶದಂತೆ ಕೃತಿಗಳನ್ನು ಮಾಡಿದರು ಅಂತೆಯೇ ಅವರು 'ಸಮರ್ಥ'ರೆಂದು ಪ್ರಸಿದ್ಧ ರಾದರು ಭಗವದ್ಭಕ್ತಿಯಿಂದಲೇ ದೇಶಭಕ್ತಿಯು ಸಾಧ್ಯವು ಎಂದು ರಾಮದಾಸರು ಹೇಳಿದ್ದಾರೆ - ಆದಿ ಭಗವದ್ಭಕ್ತಿ, ಮಗ ದೇಶಭಕ್ತಿ" ಅಥವಾ ಭಗ ವದ್ಭಕ್ತಿಯೇ ದೇಶಭಕ್ತಿಯೆಂದು ನಿರೂಪಿಸಿದ್ದಾರೆ

ಧರ್ಮ ಸ್ಥಾಪನೆಚೆ ನರ
ತೆ ಈಶ್ವರಾಚೆ ಅವತಾರ
ಜಾಲೆ ಜಹೇತ ಪುಢೆ ಹೋಣಾರ
ದೇಣೇ ಈಶ್ವರಾಚೆ ||

"ಧರ್ಮಸ್ಥಾಪನೆ ಮಾಡುವ ನರರು ಈಶ್ವರನ ಅವತಾರಿಗಳು ಈಶ್ವರನ ಕೊಡುಗೆಯಿಂದ ಅವರೇ ಮುಂದಾಳುಗಳಾಗಲಿ" ಎಂದು ಪ್ರಾರ್ಥಿ ಸುವೆ

|| ಜಯಜಯ ರಘುವೀರ ಸಮರ್ಥ ||

***


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು.
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು-
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ಉತ್ತರ ಕನ್ನಡ ಜಿಲ್ಲೆಯಲ್ಲಿ ಲಿಂಗಾರಾಧನೆ

**ಹೊನ್ನಾವರ ಆರ್ ಜಿ ಶ್ಯಾನಭಾಗ**

ಉತ್ತರ ಕನ್ನಡ ಜಿಲ್ಲೆ ಲಿಂಗಾರಾಧನೆಯ ತವರು ಇಲ್ಲಿಯ ಶ್ರೀ ಕ್ಷೇತ್ರಗಳಾದ ಮುರ್ಡೇಶ್ವರ, ಧಾರೇಶ್ವರ, ಗುಣವಂತೆ, ಗೋಕರ್ಣ, ಸಿದ್ದೇಶ್ವರ, ಯಾಣ, ಬನವಾಸಿ, ವಂಚಲಿಂಗ ಹಾಗೂ ಸಹಸ್ರಲಿಂಗಗಳು, ಲಿಂಗ ಹಾಗೂ ಶಿವಾರಾಧನೆಗೆ ಜನಾಧರಣೀಯಗೊಂಡಿವೆ ಇಲ್ಲಿ ನಡೆಯುತ್ತಿರುವ ಲಿಂಗಾರಾಧನೆ ರಾಮಾಯಣದಷ್ಟೇ ವುರಾತನವೆಂದು ಗೋಕರ್ಣ ಮಹಾತ್ಮೆಯಿಂದ ತಿಳಿದು ಬರುತ್ತದೆ ರಾಮಾಯಣದ ಪ್ರತಿನಾಯಕ ರಾವಣ ಲಿಂಗಾರಾಧನೆಗೆ ನಾಂದಿಯನ್ನು ಹಾಡಿದನು ಅವನು ವಂಚ ಶಿವಕ್ಷೇತ್ರಗಳ ನಿರ್ಮಾವಕ

## ಲಿಂಗಾರಾಧನೆಗೆ ನಾಂದಿ

ರಾವಣನ ತಾಯಿಯಾದ ಕೈಕಸೆಯು ಕಡಲತೀರದ ಮೇಲೆ ಮಳಲಲಿಂಗವನ್ನು ಮಾಡಿ ದಿನನಿತ್ಯವೂ ಆರಾಧಿಸುತ್ತಿದ್ದಳು ಒಂದು ದಿನ ಸಮುದ್ರ ರಾಜನ ಅಲೆಗಳು ಆರಾಧಿಸುತ್ತಿರುವ ಲಿಂಗವನ್ನು ಕಬಳಿಸಿದವು ತಾಯಿಯ ಸಂತಾವವನ್ನು ಅಂತ ರಾವಣ ಮಹಾಶಯನು, ತಾನು ಶಿವನ ಆತ ಲಿಂಗವನ್ನು ತಂದು ಕೊಡುವುದಾಗಿ ವಚನವನ್ನಿತ್ತನು ನಿಂತ ಮೆಟ್ಟಿನಲ್ಲಿಯ ಶಿವನ ತವಸ್ಸಿಗಾಗಿ ಕೈಲಾಸಗಿರಿಯ ಬುಡಕ್ಕೆ ತೆರಳಿದನು ದೀರ್ಘ ತಪಸ್ಸಿನಿಂದ ತಾಳ್ಮೆಗೆಟ್ಟಿದ್ದ ರಾವಣನು ಅಗ್ನಿಕುಂಡವನ್ನು ಹೊತ್ತಿಸಿ ತನ್ನ ತಲೆಯನ್ನು ಒಂದೊಂದಾಗಿ ಕಡಿದು ರುದ್ರನಿಗೆ ಆಹುತಿಯನ್ನಾಗಿ ನೀಡಿದನು ಭಕ್ತವತ್ಸಲನಾದ ಶಿವನ ಮನವು ಕರಗಿತು ತನ್ನ ಹತ್ತನೆ ಶಿರವನ್ನೆ ಕಡಿದುಕೊಳ್ಳುತ್ತಿರಬೇಕಾದರೆ ಪ್ರತ್ಯಕ್ಷಗೊಂಡ ಶಿವನು ತನ್ನ ಅಭಯ ಹಸ್ತದಿಂದ ರಾವಣನ ಜೀವಕ್ಕೆ ಶ್ರೀ ರಕ್ಷೆಯನ್ನು ನೀಡಿದನು

ತನ್ನ ತಾಯಿಗಾಗಿ ಆತ್ಮಲಿಂಗವನ್ನು ಬೇಡಿದಾಗ ಹಿಂದೆ ಮುಂದೆ ನೋಡದೆ ಹಾಗೂ ಆಲೋಚನೆಯನ್ನೂ ಮಾಡದೆ ಭೋಳಾಶಂಕರನು ಆತ್ಮಲಿಂಗವನ್ನು ರಾವಣೇಶ್ವರನಿಗೆ ದಾನವಾಗಿ ನೀಡಿದನು ಆತ್ಮಲಿಂಗ ನೆಲವನ್ನು ಸ್ಪರ್ಶಿಸಿದ್ದಾದರೆ ಅದು ಅಲ್ಲಿಯೇ ತನ್ನ ಬೇರನ್ನು ಬಿಟ್ಟು ಸ್ಥಿರವಾಗುತ್ತದೆ ಎಂದು ಶಿವನು ರಾವಣನನ್ನು ನೆನಪಿಸಿದ್ದನು ಲಿಂಗದಾನ ಅಪ್ರಾಪ್ತ, ಅದು ರಾವಣನಿಗೆ ದಕ್ಕಿದರೆ ಲೋಕಕ್ಕೆ ಕಂಟಕ ಎಂದರಿತ ಇಂದ್ರಾದಿ ದೇವತೆಗಳು ಅವನ ಕೈಯಿಂದ ತಪ್ಪಿಸಲೋಸುಗ ಹೂಟವನ್ನು ಹೂಡಿದರು ಈ ಕೈವಾಡ ಮಹಾತ್ಮೆಯ ವುರುಷ ವಿಘ್ನೇಶ್ವರ ರಾವಣನಿಗೆ ವಿಘ್ನವನ್ನೊಡ್ಡಲು ಗಣವತಿಗೆ ಒಡಂಬಡಿಸಿದರು ಗೋಕರ್ಣದಲ್ಲಿಯೇ ಲಿಂಗವನ್ನೆ ಪ್ರತಿಷ್ಠಾಪಿಸಲು ವಿಷ್ಣು ಮಹಾಶಯನು ವಿಘ್ನೇಶ್ವರನನ್ನು ಮಾರ್ಗದರ್ಶಿಸಿದನು

ಇತ್ತ ರಾವಣನು ಲಂಕೆಯತ್ತ ಸಾಗುತ್ತಿರಬೇಕಾದರೆ ಕತ್ತಲೆಯು ಹರಿಯಲಾರಂಭಿಸಿತು ಕರ್ಮಠ ಬ್ರಾಹ್ಮಣನಾಗಿದ್ದ ರಾವಣನಿಗೆ ಸಂಧ್ಯಾದಿ ಕರ್ಮಗಳನ್ನು ಮಾಡದ ಹೊರತು ಅನ್ಯಮಾರ್ಗವೇ ಇರಲಿಲ್ಲ ವ್ರಾಣಲಿಂಗವನ್ನು ಭೂಸ್ಪರ್ಶಿಸದೆ ಎತ್ತಿಹಿಡಿಯಲು ಸಹಾಯಕನೋರ್ವ ವ್ಯಕ್ತಿಯ ನಿರೀಕ್ಷೆಯಲ್ಲಿದ್ದನು ಗಣವನು ವೇಷಮರೆಸಿ ದನಗಾಹಿಯ ರೂಪದಲ್ಲಿ ಅಲ್ಲಿಗೆ ಬಂದನು 'ಎಲೇ ಮಾಣಿಯೇ ನಾನು ಸಂಧ್ಯಾವಂದನ ಮುಗಿಸಿ ಬರುವವರೆಗೆ ಈ ಗಂಟನ್ನು (ವ್ರಾಣಲಿಂಗ) ಕೈಯಲ್ಲಿ ಹಿಡಿದುಕೊ, ಇದನ್ನು ಭೂಮಿಯ ಮೇಲಿಡಬೇಡ' ಎಂದು ದನಗಾಹಿಯ ಹತ್ತಿರ ಅಂಗಲಾಚಿಕೊಂಡು ಬೇಡಿಕೊಂಡನು 'ನಾನು ಮೂರು ಸಲ ನಿನ್ನನ್ನು ಕರೆಯುತ್ತೇನೆ ಮೂರನೇ ಕರೆಗೆ ನೀನು ಬಾರದಿದ್ದರೆ ಅದನ್ನು ತಾನು ನೆಲದ ಮೇಲೆ ಇಡುವೆ' ಎಂದುದಾಗಿ ದನಗಾಹಿ ಗಣವ ರಾವಣನ ಮೇಲೆ ಶರತ್ತನ್ನು ಹೇರಿ ವ್ರಾಣಲಿಂಗವನ್ನು ಕೈಯಲ್ಲಿ ಹಿಡಿದುಕೊಂಡು ನಿಂತನು

## ಆತ್ಮಲಿಂಗದ ಮೇಲೆ ತ್ರಿಲೋಕ. ಭಾರ

ಆತ್ಮಲಿಂಗದ ಮೇಲೆ ಸಕಲದೇವತೆಗಳು ಮೂರು ಲೋಕದ ಭಾರವನ್ನು ಹೇರಿದರು. ಮೂರನೇ ಬಾರಿ ರಾವಣನನ್ನು ಕರೆಯುತ್ತಲೆ ಪ್ರಾಣಲಿಂಗದ ಭಾರವನ್ನೇ ಸಹಿಸಲಿಕ್ಕಾಗದೆ ಗಣವನು ಅದನ್ನು ನೆಲದ ಮೇಲಿಟ್ಟನು ಲಿಂಗವಪ್ಪ ವಾತಾಳವನ್ನೇ ಭೇದಿಸಿ ತನ್ನ ಬೇರನ್ನು ಬಿಟ್ಟು ಅಲ್ಲಿಯೇ ಸ್ಥಿರವಾಯಿತು ಆ ವಾವನ ತಾಣವೇ ಭೂ ಕೈಲಾಸವಾಗಿ ಶ್ರೀ ಕ್ಷೇತ್ರ ಗೋಕರ್ಣ ಎಂದು ನಾಮವಾಸಿಯಾಯಿತು

**ರಾವಣನ ದೈತ್ಯ ಶಕ್ತಿಯಿಂದಲೂ ಕೀಳಲೂ ಅಸಾಧ್ಯವಾದ ಈ ಲಿಂಗ ಮಹಾಬಲೇಶ್ವರ ಎಂಬ**



ಶ್ರೀ ಯಾಣಕ್ಷೇತ್ರ ಪುರಾಣ -- ತಾಳೆಯೋಲೆ ಪ್ರತಿ

ಇತಿಹಾಸ ಪ್ರಸಿದ್ಧ ಗೇರಸೋಪ್ಪೆಯ ಲಿಂಗ

ಹೆಸರನ್ನು ಪಡೆಯಿತು ರುದ್ರನು ಉದಯಿಸಿದ ಸ್ಥಾನದಲ್ಲಿಯೇ ಪ್ರಾಣಲಿಂಗ ಪ್ರತಿಷ್ಠಾಪನೆಗೊಂಡಿರುವುದಕ್ಕಾಗಿ ಗೋಕರ್ಣ ರುದ್ರಯೋನಿ ಎಂಬ ಇನ್ನೊಂದು ಹೆಸರನ್ನು ಪಡೆದಿದೆ ಲಿಂಗದ ಬಳಿ ಬಂದು ರಾವಣನು ಮಂಡಿಯೂರಿ ಅದನ್ನು ಕೀಳಲು ಹೆಣಗಾಡಿದ, ಲಿಂಗ ಸಂಪುಟ ಅವನ ಕೈಗೆ ಬಂದಿತು ಅದನ್ನು ಉತ್ತರ ದಿಕ್ಕಿಗೆ ಒಗೆದನು ಈ ಸಂಪುಟ ಬಿದ್ದಿರುವ ತಾಣವೇ ಸೆಜ್ಜೇಶ್ವರ ಎಂಬ ಶ್ರೀ ಕ್ಷೇತ್ರವಾಯಿತು ಇದು ಕಾರವಾರದ ಸಮೀಪದಲ್ಲಿದೆ ಸಂಪುಟದ ಮೇಲ್ಭಾಗವನ್ನು ದಕ್ಷಿಣ ದಿಕ್ಕಿಗೆ ಒಗೆದನು ಅದು ಹೊನ್ನಾವರ ಸಮೀಪದಲ್ಲಿರುವ ಗುಣವಂತೆಗೆ ಬಂದು ಬಿದ್ದಿತು ಅದು ಗುಣವಂತೇಶ್ವರ ಎಂಬ ಹೆಸರಿನ ಕ್ಷೇತ್ರವಾಯಿತು ಸಂಪುಟಕ್ಕೆ ಕಟ್ಟಿದ ವಸ್ತುವನ್ನು ಮುರಿದು ದಕ್ಷಿಣ ದಿಕ್ಕಿಗೆ ಎಸೆದನು ಇದು ಭಟ್ಕಳದ ಸಮೀಪ ಇರುವ ಮುರ್ಡೇಶ್ವರ ಕ್ಷೇತ್ರವಾಯಿತು ಕೊನೆಯದಾಗಿ ವಸ್ತ್ರಕ್ಕೆ ಕಟ್ಟಿದ ದಾರವನ್ನು ದಕ್ಷಿಣಕ್ಕೆ ಒಗೆದನು ಅದು ಧಾರೇಶ್ವರವಾಯಿತು ಮಹಾಬಲಶಾಲಿಯಾದ ರಾವಣನಿಂದಲೂ ಕೀಳಲಾಗದ ಲಿಂಗ ಮಹಾಬಲೇಶ್ವರವಾಗಿ ಗೋಕರ್ಣದಲ್ಲಿಯೇ ನೆಲೆಗೊಂಡಿತು ಪಂಚಕ್ಷೇತ್ರಗಳ ದೇವತೆಗಳಾದ ಮಹಾಬಲ, ಮೃಡ, ಶಂಭು, ಧಾರೇಶ, ಸಜ್ಜೆಕೇಶ್ವರ, ಇವರ ಸ್ಮರಣೆಯಿಂದ ಮುಕ್ತಿ ಲಭಿಸುವುದೆಂದು ಸ್ಕಾಂದಪುರಾಣ ಹೇಳುತ್ತದೆ ಗುಣವಂತೆಯ ಮೂಲಲಿಂಗ ಜ್ಯೋತಿರ್ಮಯವಾಗಿದ್ದು ಪೀಠಗಳ ಕೆಳಗೆ ಜಲದಲ್ಲಿದೆ ಎಂದು ಹೇಳಲಾಗುತ್ತದೆ ಸೂರ್ಯಾಸ್ತಮಯ ಅರ್ಚಕರು ಪೀಠಗಳನ್ನು ತೆಗೆದು ನಾಳ ಶೋಧ ಮಾಡುವಾಗ ಆ ತೇಜೋಮಯ ಲಿಂಗದ ಪ್ರಭೆಯನ್ನು ಸಹಿಸಿಕೊಳ್ಳಲಿಕ್ಕಾಗದೆ ಮೂರ್ಛಿತರಾದ ಸಂಗತಿಯನ್ನು ಜನರು ಇಂದಿಗೂ ಆಡಿಕೊಂಡು ಹೇಳುತ್ತಾರೆ

ಮಾಘವದ್ಯ 14ನೇ ದಿನ ಶಿವರಾತ್ರೆಯ ಕಾಲದಲ್ಲಿ ಒಂದೇ ಒಂದು ಬಿಲ್ವಪತ್ರ, ಬಿಂದು ಮಾತ್ರ ನೀರು ಇವುಗಳಿಂದ ಮಹಾಬಲನನ್ನು ಪೂಜಿಸುವವನ ಸುಕೃತ ವರ್ಣಿಸಲು ಬ್ರಹ್ಮನಿಂದಲೂ ಶಕ್ಯವಾಗದು ಗೋಕರ್ಣ, ಬಿಲ್ವಪತ್ರ, ಮಹಾಬಲೇಶ್ವರ, ಶಿವರಾತ್ರೆ, ಇವು ನಾಲ್ಕು ಒಮ್ಮೇಲೆ ಕೂಡಿ ಬರಲು ಅನಂತ ಜನ್ಮಗಳ ಪುಣ್ಯ ಒದಗಿ ಬರಬೇಕು ಈ ಪರ್ವಕಾಲದಂದು ಮಾಡಿರುವ ಪೂಜಾ ದಾನಾದಿಗಳು ಒಂದೊಂದು ಅಕ್ಷಯವಾಗುವುವು ಎಂದು ಸಂಸ್ಕೃತ ಶ್ಲೋಕ ಒಂದು ಗೋಕರ್ಣ ಕ್ಷೇತ್ರದ ಮಹಿಮೆಯನ್ನು ಸಾರುತ್ತದೆ

## ಶಿವಾತ್ಮಲಿಂಗ

ಶಿವನ ಆತ್ಮಲಿಂಗವೆಂದರೇನು ಎಂದು ತಿಳಿದವರು ಬಹಳ ಕಡಿಮೆ ಇದು ಹೊಂಬಣ್ಣ ಇರುವ ಮೂರು ಕೋಡಿನ ಮೃಗದ ಒಂದು ಕೋಡು ಈ ಕೋಡಿನ ಕುರಿತಾಗಿ ಪೌರಾಣಿಕ ಕಥೆಯೊಂದಿದೆ ಬ್ರಹ್ಮನಿಂದಾದ ವಿಶ್ವಸೃಷ್ಟಿಯನ್ನು ಕಂಡು ಕುಪಿತನಾದ ರುದ್ರ ಬ್ರಹ್ಮಸೃಷ್ಟಿಯ ಸಾರವನ್ನೇ ಹೀರಿ ಬಂಗಾರದ ಬಣ್ಣದಂತೆ ಮಿಂಚುವ ಮೃಗ ಮಾಡಿದನು ಎಲ್ಲಾಶಕ್ತಿ ಹುದುಗಿರುವ ಈ ಮೃಗವನ್ನು ತೆಗೆದುಕೊಂಡು ರುದ್ರ ಕೈಲಾಸಕ್ಕೆ ತೆರಳಿದನು ಅವನ ಈ ಕ್ರಿಯೆಯಿಂದ ದೇವತೆಗಳೆಲ್ಲರೂ ಸತ್ವಹೀನರಾಗಿದ್ದರು ತಮ್ಮ ಸತ್ವಹರಣ ಮಾಡಿದ ರುದ್ರನನ್ನು ದೇವತೆಗಳು ಆರಾಧಿಸಿದರು ಶಿವನ ಕೃಪೆಯಿಂದ ದೇವತೆಗಳು ತಮ್ಮ ಸತ್ವವನ್ನು ತಿರುಗಿ ಪಡೆದರು ರುದ್ರನ ಸತ್ವದ ಶೃಂಗವೇ ಆತ್ಮಲಿಂಗ ಈ ಆತ್ಮಲಿಂಗದ ನೆರವಿನಿಂದಲೇ ದೇವತೆಗಳು ತಾವು ಕಳೆದುಕೊಂಡಿರುವ ಐಶ್ವರ್ಯವನ್ನು ತಿರುಗಿ ಪಡೆದರು

ಒಂದು ವಾಣಿಪೀಠ, ಅದರ ಮಧ್ಯೆ ಚಿಕ್ಕ ಕುಳಿ, ಆ ಕುಳಿಯಲ್ಲಿ ಕೈಯಾಡಿಸಿ ಇದುವೇ ಮಹಾಬಲೇಶ್ವರ ಎಂದು ಅರ್ಚಕರು ಗೋಕರ್ಣದಲ್ಲಿ ಬಂದಿರುವ ಯಾತ್ರಿಕರನ್ನು ತೋರಿಸುತ್ತಾರೆ ಇದುವೇ ಶಿವಾತ್ಮಲಿಂಗ

## ಪಂಚಭಾವದ ಪಂಚಲಿಂಗ

ಶಿರಸಿಯ ವನಸಿರಿಯ ಸೆರಗಿನಲ್ಲಿ ಕಂಗೊಳಿಸುವ ಇನ್ನೊಂದು ಲಿಂಗಾರಾಧನೆಯ ತಾಣವೆಂದರೆ ಪಂಚಲಿಂಗ ಹೆಗಡೆಕಟ್ಟೆಯ ಎಡಬದಿ ಇರುವ ಕಿರಿಯ ಗುಡ್ಡವೇ ಪಂಚಲಿಂಗ ಪಂಚಲಿಂಗೇಶ್ವರ ದೇವಾಲಯದ ಎರಡು ಅಡಿ ಅಂತರದಲ್ಲಿ ಐದು ಲಿಂಗಗಳು ರಾರಾಜಿಸುತ್ತಿವೆ ಕರಿ ಶಿಲೆಯಲ್ಲಿ ಪಡಿಮೂಡಿಸಿರುವ ಈ ಐದು ಲಿಂಗಗಳಲ್ಲಿ ನಾಲ್ಕು ಮಾತ್ರ ದೊಡ್ಡ ಗಾತ್ರದವುಗ

ಳಾಗಿವೆ ಒಂದೇ ತಾಣದಲ್ಲಿ ಐದು ಲಿಂಗಗಳು ಕಾಣಬರವುದು ಒಂದು ಅವರೂಪದ ದೃಶ್ಯ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಹಾಗೂ ಈಶಾನ ಎಂಬ ಅಭಿಧಾನಗಳಿಂದ ಈ ಲಿಂಗಗಳು ಆರಾಧಿಸಲ್ಪಡುತ್ತವೆ ಶಿವನು ಪಂಚ ಭಾವದಿಂದ ಕೆಲಕಾಲ ಇಲ್ಲಿ ತಪಸ್ಸನ್ನು ಮಾಡಿದನೆಂದು ಇಲ್ಲಿಯ ಸ್ಥಳ ಪುರಾಣ ಹೇಳುತ್ತದೆ

ಇದರಲ್ಲಿಯ ದೊಡ್ಡ ಪ್ರಮಾಣದ ಲಿಂಗವನ್ನು ತಿರುಮಲ ಎನ್ನುವ ಶಿವಭಕ್ತನು ತೀರ್ಥಾಕನು ಎನ್ನುವ ಕಡೆಯಿಂದ ತಂದು ಇಲ್ಲಿ ಸ್ಥಾಪಿಸಿದನು ಉಳಿದ ನಾಲ್ಕು ಲಿಂಗಗಳನ್ನು ಶಿವನು ಸ್ವಪ್ನದಲ್ಲಿ ನೀಡಿರುವ ಆದೇಶದಂತೆ ಅವನು ಬೆಟ್ಟಣ್ಣೆ ಕಟ್ಟು ಎನ್ನುವ ಹೊಳೆಯ ದಂಡೆಯ ಕಡೆಯಿಂದ ತಂದು ಇಲ್ಲಿ ಸ್ಥಾಪಿಸಿದನು ಈ ಪಾವನ ತಾಣದಿಂದ ಮೂರು ಫರ್ಲಾಂಗ ದೂರದಲ್ಲಿ ಕಿರು ಜಲಧಾರೆಯೊಂದು ಬೀಳುತ್ತಿದೆ, ಅಭಿಷೇಕ ಹಾಗೂ ಪೂಜೆಗೆ ದೊರೆಯುವ ಅಲ್ಲಿಯ ಏಕಮೇವ ಕಿರು ತೊರೆ ಇದು, ಯಾವ ಕಾಲದಲ್ಲಿಯೂ ಬತ್ತಿ ಹೋಗದೆ ಸರ್ವಕಾಲಿಕ ನೀರಿನ ಸೆಲೆ ಇದಾಗಿರುವುದಲ್ಲದೆ, ಬೇರೆ ಯಾವ ತಾಣದಲ್ಲಿಯೂ ಬಾವಿಯನ್ನು ಅಗೆದು ತೆಗೆದರೆ ಒಂದು ಹನಿ ನೀರು ದೊರಕದಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ

## ಭೈರವೇಶ್ವರ ತಾಣ ಯಾಣ

ಸಹ್ಯಾದ್ರಿಯ ಮಡಿಲಲ್ಲಿ ಕಾನಿನ ಒಡಲೊಳಗೆ ಶ್ರೀ ಕ್ಷೇತ್ರ ಯಾಣ ನೆಲೆಸಿದೆ ಕುಮಟೆಯಿಂದ ಸಿರ್ಸಿಗೆ ತೆರಳುವ ರಾಜಮಾರ್ಗದ ಪಕ್ಕದಲ್ಲಿರುವ ಆನೆಗುಂದಿಯಿಂದ ಕವಲೊಡೆದ ಹಾದಿಯು ಯಾಣಕ್ಕೆ ನಮ್ಮನ್ನು ಒಯ್ಯುತ್ತದೆ


ಯಾಣದ ಮೋಹಿನಿ ಶಿಖರ

ಯಾಣಕ್ಕೆ ಹೋಗಲು ಕಾಲು ಹಾದಿಯೇ ಗತಿ ಇಲ್ಲಿಗೆ ಹೋಗುವ ರಸ್ತೆ ಸರ್ವಕಾಲಿಕವಲ್ಲ, ಕೇವಲ ಋತುಕಾಲಿಕ ಅದರಿಂದಲೇ ಯಾಣಕ್ಕೆ ನಡೆದು ಹೋಗಲು ತ್ರಾಣ ಬೇಕೆಂಬ ಗಾದೆಯೂ ಹುಟ್ಟಿದೆ ಯಾಣದ ಘಟ್ಟಹತ್ತಲು ಬಲು ಬಿಗಿ ಹಣ ಇದ್ದರ ಗೋಕರ್ಣ ಸೊಕ್ಕಿದ್ದರೆ ಯಾಣ ಎಂಬ ನಾಮತಿಯೊಂದಿದೆ ಶಿವರಾತ್ರೆಯೊಂದನ್ನು ಬಿಟ್ಟು ಉಳಿದೆಲ್ಲ ಕಾಲಗಳಲ್ಲಿ ಯಾಣ ಕ್ಷೇತ್ರ ಬಿಕೋ ಎನ್ನುತ್ತದೆ ಶಿವರಾತ್ರೆಯಂದು ಇಲ್ಲಿಯ ಭೈರವೇಶ್ವರನ ಅಭಿಷೇಕಕ್ಕೆ ಬಂದಿರುವ ಭಕ್ತ ಭಜಕರಿಂದ ಇದು ವಿಜೃಂಭಿಸುತ್ತದೆ

ಭಸ್ಮಾಸುರನು ಅಟ್ಟಿಸಿಕೊಂಡು ಬಂದಾಗ ಭೈರವೇಶ್ವರನು ದೊಡ್ಡಗಾತ್ರದ ಕಲ್ಲೊಂದರ ಮರೆಯಲ್ಲಿ ಇಲ್ಲಿ ಅವಿತುಕೊಂಡನು ವಿಷ್ಣು ಮೋಹಿನಿಯವೇಷವನ್ನು ಧರಿಸಿ ಭಸ್ಮಾಸುರನನ್ನು ಈ ಸ್ಥಳದಲ್ಲಿಯೇ ಭಸ್ಮಗೊಳಿಸಿದನೆಂದು ಶ್ರೀ ಕ್ಷೇತ್ರ ಯಾಣದ ಸ್ಥಳ ಪುರಾಣವು ಹೇಳುತ್ತದೆ ಯಾಣವನ್ನು ಸಮೀಪಿಸುತ್ತಿದ್ದಂತೆ ಅಲ್ಲಿಯ ಕೆಂಪು ಮಣ್ಣು ಕಪ್ಪು ಮಣ್ಣಾಗಲು ಭಸ್ಮಾಸುರನ ಭಸ್ಮವೇ ಕಾರಣ ಎಂದು ಹೇಳಲಾಗುತ್ತದೆ

ಯಾಣಕ್ಕೆ ಬಂದ ಯಾತ್ರಾರ್ಥಿಗಳು ಮೊದಲು ಅಲ್ಲಿಯ ಗಣಪತಿಯ ದೇವಾಲಯದ ದರ್ಶನವನ್ನು ಪಡೆದು ತದನಂತರ ಭೈರವೇಶ್ವರನ ದರ್ಶನವನ್ನು ಪಡೆಯಲು ತೆರಳುವರು ಭೈರವೇಶ್ವರನ ಮೂರ್ತಿಯ ಎದುರು ಇತ್ತೀಚೆಗೆ ಸ್ಥಾಪಿಸಲಾದ ಶಿವಲಿಂಗ ಒಂದಿದೆ ಶಿವಲಿಂಗದ ಮೇಲೆ ಸದಾ ಅಭಿಷೇಕ ಗೈಯುವ ಜಲಧಾರೆಯೊಂದು ಬೀಳುತ್ತಿದೆ

ಶಿವರಾತ್ರೆಯ ಪರ್ವಕಾಲದಂದು ಗೋಕರ್ಣದಲ್ಲಿಯ ಆತ್ಮಲಿಂಗದ ದರ್ಶನವನ್ನು ಪಡೆದು ಯಾಣದ ಭೈರವೇಶ್ವರನನ್ನು ನಮಿಸಿ ಇಡಗುಂಜಿಯ ಸಿದ್ಧಿವಿನಾಯಕನನ್ನು ಸೇವಿಸಿದರೆ ಭಕ್ತರ ಸಕಲ ಪಾಪ ನಾಶವಾಗಿ ಪುಣ್ಯ ಲಭಿಸುವುದೆಂಬ ನಂಬಿಗೆ ಇದೆ


ಯಾಣದ ಭೈರ ಶಿಖರ

## ಮಧುಕೇಶ್ವರ

ಶಿರಸಿ ತಾಲೂಕಿನ ಆಗ್ನೇಯ ದಿಕ್ಕಿಗೆ ವರದಾ ನದಿಯ ತಟದ ಮೇಲೆ ಐತಿಹಾಸಿಕ ಪ್ರಸಿದ್ಧ ಬನವಾಸಿ ಕ್ಷೇತ್ರ ನೆಲೆಸಿದೆ ಮಹಾಭಾರತದಲ್ಲಿ ಈ ತಾಣ ವನವಾಸ ಎಂಬ ಹೆಸರನ್ನು ಪಡೆದಿದೆ ಇಲ್ಲಿಯ ಮಧುಕೇಶ್ವರ ದೇವಾಲಯ ಕದಂಬ ಹೊಯ್ಸಳ ಹಾಗೂ ವಿಜಯನಗರ ಕಾಲದ ಶಿಲ್ಪಕಲೆಯ ಸಂಗಮ ತಾಣ ಈ ದೇವಾಲಯವನ್ನು ಹೆಸರಾಂತ ಶಿಲ್ಪಿ ಜಕ್ಕಣಾಚರಿಯು ಕಟ್ಟಿಸಿದನು ಈ ದೇವಾಲಯದಲ್ಲಿರುವ ಲಿಂಗ ಜೇನು ತುಪ್ಪ ವರ್ಣದಾಗಿರುವುದರಿಂದ ಇದಕ್ಕೆ ಮಧುಕೇಶ್ವರ ಲಿಂಗ ಎನ್ನುತ್ತಾರೆ 

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾಧನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ನಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುಧಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿ ನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೈಶಿಷ್ಟ್ಯವನ್ನು ವಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ-

ವೈಷ್ಣವತೆಯ ಉಗಮ-ವಿಕಾಸ ವಾಸುದೇವ-ವೃಷ್ಣಿಕುಲಜ-ನಿಂದ ಆರಂಭವಾದ ಈ ವೈಷ್ಣವ ಧರ್ಮ ಇಂದು ಇನ್ನೂರಕ್ಕೂ ಮಿಗಿಲಾಗಿ ಉಪಶಾಖೆಗಳಾಗಿ ಭಾರತದಲ್ಲೆಲ್ಲ ಹರಡಿದೆ ದಕ್ಷಿಣ ಭಾರತದಲ್ಲಿನ ವೈಷ್ಣವ ಧರ್ಮ ವೈಖಾನಸ ಹಾಗೂ ಪಾಂಚರಾತ್ರಾಗಮಗಳಿಂದ ವಿಶೇಷ ಪ್ರಭಾವಿತವಾದದ್ದನ್ನು ಶಿಲ್ಪಗಳ ಚಿತ್ರಗಳನ್ನು ತೋರಿಸಿ ಅವುಗಳ ಬಹಿರಂಗ ಅರ್ಥವನ್ನೂ, ಗೂಢಾರ್ಥವನ್ನೂ ವಿವರಿಸಲಾಗಿದೆ ಈ ವಿಭಾಗದಲ್ಲಿ ೧೧ನೇ ಶತಮಾನದ ವಿಶಿಷ್ಟ ವಿಗ್ರಹಗಳಿದ್ದು ಅವುಗಳನ್ನು ನಾಗುಲಾಪುರಂ ದೇವಾಲಯದಿಂದ ಸಂಗ್ರಹಿಸಲಾಗಿದೆ

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ಪ್ರಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ವದ ಪ್ರವತ್ತಿ ಮಾರ್ಗಕ್ಕೆ ಆಳ್ವಾರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ, ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ಇಷೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

**ಪರಂಪರೆಯ ಪರಿಚಯ ಹೊಂದಿರಿ - ಒಮ್ಮೆ ಭೇಟಿ ನೀಡಿರಿ**

---

**ಕಾಲ: ಬೆಳಗ್ಗೆ ೮ ರಿಂದ**
**ರಾತ್ರಿ ೮.**

**ಟಿಕೆಟ್ ರೂ. ೧-೦೦ (ಹಿರಿಯರಿಗೆ)**
**" " ೦-೫೦ (ಕಿರಿಯರಿಗೆ)**

ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ

# ಗೋರೆಬಾಳ ಹನುಮಂತರಾಯರ ಕೊಡುಗೆ

–ಪ್ರೊ ವಸಂತ ಕುಷ್ಟಗಿ

ಚಿತ್ರಗಳು : ದಾಸಸಾಹಿತ್ಯ ಪ್ರಾಜೆಕ್ಟ್, ತಿ.ತಿ.ದೇ.

ಬದುಕಿನಲ್ಲಿ ಶ್ರದ್ಧೆಯನ್ನು ತಂದು, ಬದುಕನ್ನು ಸ್ವಾದಿಷ್ಟಗೊಳಿಸಿ, ಬದುಕನ್ನು ಆರೋಗ್ಯ ಧಾಮವಾಗಿಸುವುದರ ಕಡೆಗೆ ಪ್ರಚೋದಿಸುವುದೇ ಸಾಹಿತ್ಯದ ಧರ್ಮ ಅಂತಹ ಆರೋಗ್ಯಧಾಮದ ಅಂತಃಸತ್ವವೇ ಆಧ್ಯಾತ್ಮ ಆ ಅಂತಃಸತ್ವದ ವಿವೇಕದಿಂದ ಪರಿಪೂರ್ಣ ಜ್ಞಾನಪ್ರಾಪ್ತಿ ಈ ಕಾರ್ಯವನ್ನು ಕನ್ನಡ ಸಾಹಿತ್ಯದಲ್ಲಿ ಪರಣಾಮಕಾರಿಯಾಗಿ ವಚನಕಾರರು ಮತ್ತು ಹರಿದಾಸರು ಎಸಗಿದ್ದಾರೆ ಅವರು, ತಾವು ಬದುಕಿದ್ದನ್ನೆಲ್ಲ ಸಾಹಿತ್ಯವಾಗಿಸಿದ್ದಾರೆ ಮುಂದಿನ ಪೀಳಿಗೆಯು ಚೆನ್ನಾಗಿ ಅನುಭೋಗಿಸುವುದಕ್ಕೆ, ಕಳುವೇ ಆಗದಂತಹ ತವನಿಧಿಯನ್ನು ಕೊಟ್ಟಿದ್ದಾರೆ ಹೀಗೆ ವಚನಕಾರರು ಬಾಳಿ ಹೇಳಿದುದೆಲ್ಲ ವಚನಸಾಹಿತ್ಯವಾಯ್ತು ಹರಿದಾಸರು ಬಾಳಿ ಹಾಡಿದ್ದೆಲ್ಲ ಹರಿದಾಸ ಸಾಹಿತ್ಯವಾಯ್ತು ಈ ಎರಡೂ ಬಗೆಯ ಸಾಹಿತ್ಯದಲ್ಲಿ ಸ್ವಾಭಿಮಾನ, ಶೀಲ, ನೀತಿ ಪರೋಪಕಾರ ಬುದ್ಧಿ ಇತ್ಯಾದಿ ಜೀವನ ಮೌಲ್ಯಗಳಿಗೇ ಒತ್ತು ಇದ್ದು, ವಿಶ್ವಕುಟುಂಬವನ್ನೇ ಸಾಧಿಸುವುದರ ಕಡೆಗೆ ಸಾಧಕರನ್ನು ನಿರತಗೊಳಿಸುವಲ್ಲಿ ಯಶಸ್ಸು ಪಡೆದಿದೆ ಜಾತಿಭೂತ, ಬಡವ – ಬಲ್ಲಿದ ಮೊದಲಾದ ತಾರತಮ್ಯಗಳಿಗೆ ಇಂಬು ನೀಡದೆ, ಸಮಾನ ಅವಕಾಶಗಳಿಗೆ ಸ್ಪಂದಿಸಲು ಉತ್ತೇಜನ ನೀಡಿದೆ ಪೌರುಷದ ಬಾಳನ್ನೇ ಅನುಷ್ಠಾನಕ್ಕೆ ತರಲು ಪ್ರಯತ್ನಿಸಿವೆ

ಇಂಥ ಅಪರೂಪವಾದ ಸಾಹಿತ್ಯವು, ಪರಿಸ್ಥಿತಿಯ ದಾರುಣತೆಗೆ ತುತ್ತಾಗಿ ಮಡಿವಂತಿಕೆ ಪಡೆಯಿತು ಮತ್ತೆ ಕೆಲವು ಸಲ ವಿವೇಕ ಶೂನ್ಯವಾದ ಮತೀಯ ತುಳಿತಕ್ಕೆ ಸಿಕ್ಕು ನುಚ್ಚುನುರಿಯಾಯಿತು ಆಗ ಕೆಲವು ಜನ ಆಸ್ತಿಕರು ಅದನ್ನು ಹೇಗೋ ಭದ್ರವಾಗಿ ಮುಚ್ಚಿಟ್ಟರು ಕಾಲಸರಿದಂತೆ ಇದೆಲ್ಲ ನಶಿಸಿಹೋಗುವ ಸ್ಥಿತಿಗೆ ಬಂದಿತು ಆಗ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಡಾ|| ಫ ಗು ಹಳಕಟ್ಟಿಯವರು ಮತ್ತು ಗೋರೆಬಾಳ ಹನುಮಂತರಾಯರು ಜನ್ಮತಾಳಿದ್ದರಿಂದಲೋ ಏನೋ ಇಪ್ಪತ್ತನೆಯ ಶತಮಾನದ ಆದಿಭಾಗದಿಂದಲೂ ಇವರಿಬ್ಬರೂ ತಮ್ಮ ಸಂಪೂರ್ಣ ಜೀವನವನ್ನೇ, ಈ ಸಾಹಿತ್ಯ ಪ್ರಕಾರಗಳನ್ನು ಉಳಿಸಿಕೊಂಡು ಬರುವುದರ ಕಡೆಗೆ ಸಮರ್ಪಿಸಿದರು ಅವರ ತ್ಯಾಗ ಮನೋಧರ್ಮದ ಸೇವೆಯಿಂದಾಗಿ ಒಬ್ಬರು ವಚನಪಿತಾಮಹರೆನಿಸಿದರೆ, ಇನ್ನೊಬ್ಬರು ಹರಿದಾಸ ಸಾಹಿತ್ಯ ಪುನಃ ಪ್ರವರ್ತಕರೆನಿಸಿದರು ಇಬ್ಬರೂ ತಮ್ಮ ವೃತ್ತಿಯಲ್ಲಿ ವಕೀಲರು ಇಬ್ಬರೂ ಪ್ರವೃತ್ತಿಯಲ್ಲಿ ಅಧ್ಯಾತ್ಮಸಾಧಕರು ಇಬ್ಬರೂ ತಮ್ಮ ವಕೀಲಿವೃತ್ತಿಯನ್ನು ಬಿಟ್ಟು ಹಸ್ತಪ್ರತಿಗಳ ಸಂಗ್ರಹ, ಸಂಶೋಧನೆ, ಪರಿಷ್ಕರಣ, ಮುದ್ರಣ, ಪ್ರಕಟಣೆ, ಮಾರಾಟ – ಇವುಗಳಲ್ಲೇ ತಮ್ಮ ಆಯುಷ್ಯವನ್ನು ಸಾರ್ಥಕಮಾಡಿಕೊಂಡರು

ತಮ್ಮ ಈ ಸಾರ್ಥಕತೆಯಿಂದಾಗಿ, ಕನ್ನಡ ತವನಿಧಿಯನ್ನು ಕಾಪಾಡಿಕೊಂಡು ಬಂದು, ಮುಂದಿನ ಶತಮಾನಗಳಲ್ಲಿಯೂ, ಆ ತವನಿಧಿಯಲ್ಲಿಯ ಸಾರ್ವಕಾಲಿಕ ಜೀವನ ಮೌಲ್ಯಗಳಿಗೆ ಮಹತಿ ಬಂದೀತೆಂದು ಯಶಸ್ವಿ ಬದುಕು ಸಾಗಿಸಿದ ಶ್ರೀ ಗೋರೆಬಾಳ ಹನುಮಂತರಾಯರಿಗೆ, 1993, ಅವರ ಜನ್ಮಶತಮಾನೋತ್ಸವ ಈ ಸಂದರ್ಭದಲ್ಲಿ ಅವರು ಕನ್ನಡ ಭಾಷೆ ಮತ್ತು ಸಾಹಿತ್ಯಗಳಿಗೆ ಮಾಡಿದ ಅಪಾರ ಸಾಧನೆಗಳನ್ನು ಮತ್ತು ಅವರು ನಿರ್ವಂಚನೆಯಿಂದ ನೀಡಿದ ಕೊಡುಗೆಗಳನ್ನು ಸಿಂಹಾವಲೋಕನ ಮಾಡುವುದು ಪ್ರಸ್ತುತವಾಗಿದೆ



ಪುರಂದರ ವಿಠಲ ದಾಸಾಂಕಿತರಾದ ಗೋರೆಬಾಳರು

ದಿವಂಗತ ಗೋರೆಬಾಳ ಹನುಮಂತರಾಯರು ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನ ಗೋರೆಬಾಳ ಗ್ರಾಮದ ಶಾನುಭೋಗರ ಮನೆತನಕ್ಕೆ ಸೇರಿದವರು ಶ್ರೀ ವಾದಿರಾಜರ ಕಾಲದಿಂದಲೂ ದಾಸತ್ವವನ್ನೂ ದಾಸಧರ್ಮವನ್ನು ಸ್ವೀಕರಿಸಿ ತಮ್ಮ ಪರಿಸರವನ್ನೆಲ್ಲ ಪಾವನಗೊಳಿಸಿಕೊಂಡ ಮನೆತನದವರು ತಂದೆ ವೆಂಕಣ್ಣ ನಿಷ್ಠುರರು ಸತ್ಯಪ್ರಿಯರು ಸುಶೀಲರು ಬಡಬಗ್ಗರನ್ನೆಲ್ಲ ಪ್ರೀತಿಸಿದವರು ಊರನ್ನೆಲ್ಲ ತನ್ನ ಪರಿವಾರವೆಂದವರು ಸಾತ್ವಿಕರು, ಏಕಾಂತಭಕ್ತರು, ಆಗಿದ್ದ ಶ್ರೀಶಪ್ರಾಣೇಶವಿಠಲಾಂಕಿತ ರಾಮದಾಸರಿಂದ ಗುರುಶ್ರೀಶಪ್ರಾಣೇಶವಿಠಲ ಎಂದು ಅಂಕಿತ ಪಡೆದ ಮಹತಿಯುಳ್ಳವರು ಇಂಥ ಸುಪ್ರಸನ್ನ ಚಿತ್ತ ಸುಶೀಲ ವೆಂಕಣ್ಣನವರ ಮಗನಾಗಿ ಹನುಮಂತರಾಯರು ವಿಜಯನಾಮ ಸಂವತ್ಸರ ಶಕೆ 1815 ಎಂದರೆ ಕ್ರಿಶ 1893 ರಲ್ಲಿ ಜನ್ಮತಾಳಿ, ಕ್ರಿಶ 1969 ರಲ್ಲಿ ಹೈದರಾಬಾದಿನಲ್ಲಿದ್ದ ತಮ್ಮ ಅಳಿಯ ದಾಮೋದರರಾಯರ ಮನೆಯಲ್ಲಿ ತಮ್ಮ ಕೊನೆಯ ಉಸಿರನ್ನು ಕೃಷ್ಣಾರ್ಪಣಗೊಳಿಸಿದರು ಇವರೂ ಕೂಡ ನಿಷ್ಠುರರು, ಅನುಕಂಪಿಗಳು, ಸತ್ಯಪ್ರಿಯರು, ನಿಗರ್ವಿಗಳೇ ಆಗಿದ್ದರು

ಗೋರೆಬಾಳ ಹನುಮಂತರಾಯರು ಎಳೆತನದಿಂದಲೇ ದಾಸಸಾಹಿತ್ಯದ ಪರಿಸರವನ್ನು ಪಡೆದು, ಆ ಸಾಹಿತ್ಯದ ಅಂತರಾಳಕ್ಕೆ ಮುಟ್ಟಿ ಅದರ ಮಹತ್ವವನ್ನು ಅರಿತು, ಅದನ್ನು ಪ್ರೀತಿಸಿ, ಕರ


ಲಿಂಗಸೂಗೂರಿನಲ್ಲಿನ ಗೋರೆಬಾಳರ ಮನೆ

ತಲಾಮಲಕ ಮಾಡಿಕೊಂಡು, ಗುರುಜಗನ್ನಾಥವಿಠ್ಠಲಾಂಕಿತ ಶ್ರೀಕೋಸಗಿ ಸ್ವಾಮಿರಾಯಾಚಾರ್ಯರಿಂದ, 'ಸುಂದರ ವಿಠ್ಠಲ' ಎಂಬ ಅಂಕಿತವನ್ನು ಪಡೆದು, ಪದ ಪದ್ಯ ಸುಳಾದಿಗಳನ್ನು ರಚನೆ ಮಾಡಿ ಪರಮಾತ್ಮನಿಗೆ ಅರ್ಪಿಸಿದವರು ಚಿಕ್ಕಂದಿನಲ್ಲೆ ಅವರೂ ಎಲ್ಲರಂತೆ ಲೌಕಿಕ ವಿದ್ಯೆಯನ್ನು ಸಂಪಾದಿಸಿ ಸತ್ಯನ್ಯಾಯ ಔದಾರ್ಯಗಳಿಂದ ತಮ್ಮ ಬದುಕನ್ನು ವಿಜೃಂಭಿಸಿಕೊಂಡರು ಚಿಕ್ಕವಯಸ್ಸಿನಲ್ಲಿಯೇ ತಾಯಿಯನ್ನು ಕಳೆದುಕೊಂಡ ಇವರಿಗೆ ಲಿಂಗಸೂಗೂರಿನಲ್ಲಿ ಇವರ ಆಪ್ತರಾಗಿದ್ದ ಸುಪ್ರಸಿದ್ಧ ವಕೀಲರೂ ಆಧ್ಯಾತ್ಮವಾದಿಗಳೂ ದಾಸರೂ ಆಗಿದ್ದ ಸಂತೆಕಲೂರ ಸ್ವಾಮಿರಾಯರು ಅಂತಃಕರುಣೆಯನ್ನು ನೀಡಿ ಅವರನ್ನು ಶ್ರೇಷ್ಠ ವಕೀಲರನ್ನಾಗಿಯೂ, ಶ್ರೇಷ್ಠ ಮಾನವತಾವಾದಿಯನ್ನಾಗಿಯೂ, ಶ್ರೇಷ್ಠ ದಾನ ಪರಂಪರೆಯ ಸೊತ್ತನ್ನಾಗಿಯೂ ರೂಪಿಸಿದರು ನಮ್ಮದ್ಧ ಪ್ರಾಯದಲ್ಲಿದ್ದಾಗಲೇ ಮಹಾತ್ಮಾಗಾಂಧೀಜಿ ಅವರ ವ್ಯಕ್ತಿತ್ವದಿಂದ ಪ್ರಭಾವಿತರಾಗಿ ಸ್ವಾತಂತ್ರ್ಯದ ಆಂದೋಲನದಲ್ಲಿಯೂ ಪಾಲುದಾರರಾಗಿ ಹನುಮಂತರಾಯರು ಪರಿಸರದಲ್ಲಿ ಚಳುವಳಿಯ ಅರಿವನ್ನು ಮೂಡಿಸಿದರು ಸ್ವತಃ ನೂಲುತೆಗೆದು ಖಾದಿಯನ್ನೇ ಉಟ್ಟರು ತೊಟ್ಟರು ಸತ್ಯವಾಗಿರುವ ಪ್ರಕರಣಗಳನ್ನಷ್ಟೆ ಹಿಡಿದು ನ್ಯಾಯ ಒದಗಿಬರುವವರೆಗೆ ಹೋರಾಡಿ ಗೆಲುವನ್ನು ತಂದುಕೊಡುತ್ತಿದ್ದ ಖ್ಯಾತ ಕ್ರಿಮಿನಲ್ ವಕೀಲರಾಗಿ ಖ್ಯಾತಿಪೆತ್ತರು ಆದರೆ ಇವರು ದುಡ್ಡಿಗಾಗಿ ಯಾರನ್ನೂ ಕಾಡಿದವರಲ್ಲ ಮುಂದೆ ಸುಳ್ಳುಸೊಗದು ಹೇಳುವ ಪರಿಸ್ಥಿತಿಯು ಎದುರುಗೊಂಡಾಗ ವಕೀಲವೃತ್ತಿಗೆ ವಿದಾಯ ಹೇಳಿ, ಸಂಪೂರ್ಣ ದಾಸಪ್ರವೃತ್ತಿಯನ್ನೇ ಅವಲಂಬಿಸಿದರು ಸಂಯುಕ್ತ ಕರ್ನಾಟಕ ಪತ್ರಿಕೆಯನ್ನು ಖರೀದಿಸಿದುದಕ್ಕಾಗಿ ಒಂದೂವರೆ ದಿವಸದ ಪೋಲೀಸ ಸೆರೆಯನ್ನು ಅನುಭವಿಸಿದರು

ಲೌಕಿಕದ ಗಳಿಕೆಗೆ ವಿದಾಯ ಹೇಳಿದ ಮೇಲೆ ಗೋರೆಬಾಳರು ತಮ್ಮ ಬದುಕನ್ನೆಲ್ಲ ದಾಸಸಾಹಿತ್ಯ ಸಂಗ್ರಹ, ಪ್ರಕಾಶನ, ಪ್ರಚಾರಗಳಿಗೆ ಮೀಸಲಿಟ್ಟರು ತಮ್ಮ ಹೊಲಮನೆಗಳನ್ನೆಲ್ಲ ಧಾರೆಯೆರೆದು ಹರಿದಾಸರತ್ನಗಳನ್ನೆಲ್ಲ ಬಯಲಿಗೆ ತಂದು ದಾಸಸಾಹಿತ್ಯವನ್ನು ಸರ್ವತ್ರಗೊಳಿಸಿದರು ಕನ್ನಡ ಸಾಹಿತ್ಯದ ಸಫಲತೆಗೆ ಕನ್ನಡಿಯಾದರು ಇಂಥ ಕಾರ್ಯಸಾಧನೆಗೆ, ಭಾಷಾಜ್ಞಾನ, ವ್ಯಾಕರಣ, ಸಂಗೀತ, ಅಲಂಕಾರ, ಛಂದಸ್ಸು, ಸಂಶೋಧಕ ಪ್ರವೃತ್ತಿ, ಜ್ಞಾನ ಪಿಪಾಸೆ, ಸಂಸ್ಕಾರ, ಸಾಹಿತ್ಯಜ್ಞಾನ, ಆದರಣ - ಇವೆಲ್ಲ ಅವಶ್ಯ ಈ ಎಲ್ಲ ಲಕ್ಷಣಗಳಿಂದ ಕೂಡಿದ ರ್ತಕರಾಗಿ ದೊರೆತದ್ದು ಕನ್ನಡದ ಭಾಗ್ಯ

ವಕೀಲಿಯನ್ನು ಸಂಪೂರ್ಣಬಿಟ್ಟು, ಅಧ್ಯಾತ್ಮದ ವಶವಾದ ಮೇಲೆ, ಅವರು ಸಂಪೂರ್ಣವಾಗಿ ಕಸ್ಬಾಲಿಂಗಸೂರಿನಲ್ಲಿಯೇ ನೆಲನಿಂತರು ಶ್ರೀ ವರದೇಂದ್ರರ ಮೃತ್ತಿಕಾ ವೃಂದಾವನದ ಕ್ಷೇತ್ರ ಮಹಿಮೆಯಲ್ಲಿ ಇವರು ಪಾದು ಸಿದ್ಧವಾಯಿತು ಶ್ರೀ ಪ್ರಾಣೇಶದಾಸರು, ಗುರುಪ್ರಾಣೇಶದಾಸರು ಶ್ರೀಶಪ್ರಾಣೇಶದಾಸರು - ಮೊದಲಾದ ದಾಸಾರ್ಯರ ಸಾಧನಾತಪೋಭೂಮಿಯಲ್ಲಿ ಇವರ ತಪಸ್ಸು ಗುರಿಸಾಧಿಸಿತು ಅದಕ್ಕೆ ಕುಪ್ಪೀಭೀಮನ ಕೃಪೆಯೂ ಕೂಡಿ ಬಂದಿತ್ತು ಈ ಬಲದಿಂದಲೇ ಅವರು ಊರೂರು ಅಲೆದಾಡಿ, ಉಂಡು ಉಪವಾಸಿಯಾಗಿ - ಬಳಸಿ ಬ್ರಹ್ಮಚಾರಿಯಾಗಿ ಲಭ್ಯವಾದ ಎಲ್ಲ ದಾಸಾರ್ಯರ ಹಸ್ತಪ್ರತಿಗಳನ್ನೆಲ್ಲ ಶೇಖರಿಸಿ ಪರಿಷ್ಕರಿಸಿ ಶುದ್ಧಪಾಠಾಂತರ ನೀಡಲು ಪ್ರಯತ್ನಿಸಿದರು ಸುಲಭವಾಗಲೆಂದು ಅರ್ಥವಾಗುವ ರೀತಿಯಲ್ಲಿ ಟೀಕೆ ಟಿಪ್ಪಣಿ ಬರೆದರು ಹರಿದಾಸರ ಭಾಷೆಯು ಜನರು ಆಡುಭಾಷೆಯೆಂಬುದನ್ನು ತೀವ್ರದೃಷ್ಟಿಯಲ್ಲಿಟ್ಟುಕೊಂಡು, ಹೆಚ್ಚು ಪಾಠಾಂತರಗಳ ಗೋಜಿಗೆ ಹೋಗದೇ ಗ್ರಂಥಸ್ಥ ಭಾಷೆಯ ಚಾಕಚಕ್ಯತೆಗೆ, ದೌಲಿಗೆ ಮಾರುಹೋಗದೆ, ದೇಸೀಯ ಸೊಗಡನ್ನು ಚೆನ್ನಾಗಿ ಉಳಿಸಿಕೊಂಡೇ ಹಸ್ತಪ್ರತಿಗಳನ್ನು ಸಿದ್ಧಪಡಿಸಿ ಅಚ್ಚುಮಾಡಿಸಿದರು ಇದರಿಂದಾಗಿ ಹರಿದಾಸರು ಬದುಕಿ ಬಾಳಿದ ಬಾಷೆಯ ಸೊಗದು ಇನ್ನೂ ಹಾಗೆಯೇ ಆ ಕಾಲದ ಪದ ಪದ್ಯಗಳಲ್ಲಿ ಉಳಿದುಕೊಂಡಿದ್ದು, ಆ ಶತಮಾನಗಳ ಭಾಷಾ ಬೆಳವಣಿಗೆಯ ಇತಿಹಾಸಕ್ಕೆ ವಿಶಿಷ್ಟಕೊಡಗೆಯನ್ನು ಈ ಸಾಹಿತ್ಯ ಕೃತಿಗಳು ಉದಾರವಾಗಿ ನೀಡಿ ನಿಂತಿವೆ ಅಲ್ಲಿ ಆಡು ಭಾಷೆಯಲ್ಲಿಯ ಕೆಚ್ಚು, ಬಿಗಿ, ಎಲ್ಲವೂ ಆ ಬರವಣಿಗೆಯಲ್ಲಿ ಇನ್ನೂ ತಾಜಾ ಆಗಿಯೇ ಇವೆ ಅದೇ ರೀತಿ ಗೋರೆಬಾಳರು ಸಂಪಾದಿಸಿ ಪ್ರಕಟಿಸಿದ ಪ್ರತಿಯೊಂದು ಪ್ರಕಟಣೆಯಲ್ಲಿ ಮುದ್ರಿತವಾದ ಉಪೋದ್ಘಾತ, ಅರಿಕೆ, ಪ್ರಕಾಶಕರಮಾತು ಇತ್ಯಾದಿಗಳಲ್ಲಿ ಅದೇ ಸೊಗಡನ್ನು ತಂದಿದ್ದಾರೆ ಅಲ್ಲಿರುವ ಕೆಚ್ಚು, ಜಿಗಟು ಎಲ್ಲವೂ ಹಿಂದಿನ ದಾಸಾರ್ಯರ ಕಸುವಿನ ಭಾಷೆಯ ಪ್ರತೀಕವೇ ಆಗಿವೆ ಹೀಗಾಗಿ ಜನಪರವಾದ ಭಾಷೆ ನೆಲದ ಸೊಗಡಿನಿಂದ ಸ್ವಾರಸ್ಯವಾಗಿದ್ದು ಪರಿಣಾಮಕಾರಿಯಾಗಿದೆ ಅವರು ತಮ್ಮ ಭಾಷೆಗೆ ನವನಾಗರಿಕತೆಯ ನಾಣೆಯನ್ನು ಹಿಡಿಯಲು ಹೋಗಿಲ್ಲ ಇದುವೇ ಅವರ ಗೆಲುವಿನ ಹೆದ್ದಾರಿ ಆ ಹೆದ್ದಾರಿ

ಯಲ್ಲಿ ಅರಳಿ ನಿಂತುದೆಲ್ಲ ಅಪ್ಪಟ ಕನ್ನಡ ತಿರುಳು ಅವರು, ಆರುಭಾಗಗಳಲ್ಲಿ ಪ್ರಕಟಿಸಿದ ಜಗನ್ನಾಥ ದಾಸರ ಹರಿಕಥಾಮೃತಸಾರದ ಮೊದಲ ಸಂಪುಟ ದಲ್ಲಿ ಪ್ರಕಟಿಸಿದ ನಿವೇದನೆಯಲ್ಲಿಯ ಕೊನೆಯ ಪ್ರಾರ್ಥನೆಯನ್ನು ಈ ದೃಷ್ಟಿಯಿಂದ ಇಲ್ಲಿ ಈಗ ಗಮನಿಸಬೇಕು

"ದಾಸರೇ, ಇಂದ ಮಹಾಕಾರ್ಯಮಾಡಲು ಪ್ರೇರಿಸುವಿರಿ ಇಂದ ಅಸಾಧ್ಯ ಕಾರ್ಯ ಹೇಗೆ ಮಾಡುವುದೆಂಬ ಅಧೈರ್ಯ ತಂದುಕೊಡುವಿರಿ ನಾನು ಅಜ್ಞಾನಿಯು ಬಹು ಕಷ್ಟಕಾರ್ಯ ಹೇಗೆ ಆಗುವುದೆಂದು ಹಿಂಜರಿದರೆ ಎನ್ನ ದು ಷ್ಕರ್ಮಕ್ಕನುಸರಿಸಿ ನಾನಾರೋಗಗಳಿಂದ ಪೀಡಿತನ ನ್ನಾಗಿ ಮಾಡಿರುವಿರಿ ಸ್ನಾನ ಆಹ್ನಿಕಗಳಿಗೂ ಅಸ್ವರ ಕೊಡದಂಥ ಅರ್ಧಾಂಗ ವಾತ ವಿಕಾರದಲ್ಲಿದ್ದಾಗ, ಪುನಃ ಧೈರ್ಯವನ್ನಿತ್ತು ಕಾರ್ಯೋನ್ಮುಖನನ್ನಾಗಿ ಮಾಡಿದ ದಾಸರೇ ತಾವು ಕರುಣೆಗಳು ಈ ವರೆಗೆ ಸಾಲ್ಕುಸಲ ಈ ಪರಿ ಭಾದೆಗಳಲ್ಲಿ ಎಚ್ಚರಪಿತ್ತರೂ ನಿಮ್ಮ ಮಹಾಮಹಿಮೆಯನ್ನು ನಾನರಿಯದೆ ಹೋದೆ ಇಳಿವಯಸ್ಸು ಅನೇಕ ರೋಗೋಪದ್ರ ವಗಳ ಬಾಧೆ ಇಂದ್ರಿಯಗಳ ಕ್ಷೀಣತೆ ಮನೋ ಅಧೈರ್ಯ ಇಂಥ ಸ್ಥಿತಿಯಲ್ಲಿ ತಾವೇ ನಿಂತು ಮಹತ್ಕಾರ್ಯವನ್ನು ಮಾಡಿಸುವಿರೆಂಬ ಸುಜ್ಞಾನ ದೃಢವಾಗಿರಲಿ ದೇಶದೇಶ ತಿರುಗಿ ಪುಸ್ತಕ ಮತ್ತು ಹಣ ಸಂಗ್ರಹಿಸುವುದು ಬಹುಕಷ್ಟ ಸಕ್ರಮವಾಗಿ ಸಂಶೋಧಿಸುವುದು ಪಂಡಿತರುಗಳ ಸಹಾಯ ದಿಂದ ಪರಿಶೋಧಿಸುವುದು ಅಚ್ಚಿನಾಲಯದ ವರ ಬಾಗಿಲು ಕಾಯುವುದು ನಾನಾ ತರದ ಕಷ್ಟಗಳನ್ನು ಅನುಭೋಗಿಸುವುದು ಸಾಧಾರಣವಾ ದರೂ ದಾಸರೇ, ತಾವೇ ಧೈರ್ಯಸ್ಥೈರ್ಯವ ನ್ನಿತ್ತು, ಕಾರ್ಯ ಸಾಗಿಸುತ್ತಿರುವಿರಿ ನಿಜ ನಿಜ - ಇದೇ ತಪಸ್ಸು ಇದೇ ಯೋಗ'

ಇಲ್ಲಿಯ ನಿವೇದನೆ ಸಾತ್ವಿಕ ಭಾಷೆಯದೆ ನ್ನಿಸಿದ್ದರೂ, ಪ್ರಾಮಾಣಿಕನಿಷ್ಠವಾದ ಗಂಭೀರ ಭಾವೆಯು ಸಮರ್ಪಣಾಭಾವದ ಅಂತರಂಗವನ್ನೆಲ್ಲ ಬಿಚ್ಚಿ ಇಟ್ಟಂತಿದೆ

ಸಂಗ್ರಹ, ಸಂಪಾದನೆ, ಪ್ರಕಟಣೆ - ಈ ತ್ರಿವಿಧ ಕಾರ್ಯದಲ್ಲಿ ಸಂಪೂರ್ಣನಿರತವಾಗಿದ್ದ ಆ ಅಪೂರ್ವ ಚೇತನವು ತಮ್ಮ ಕೊನೆಯುಸಿರಿನ ಅಮೃತ ಗಳಿಗೆಯು ಬರುವವರೆಗೂ ಸುಮಾರು 75-76 ಪುಸ್ತಕಗಳನ್ನು ಪ್ರಕಟಿಸಿದುದು ಮಹತ್ವದ ದಾಖಲೆಯಾಗಿದೆ ಅವುಗಳನ್ನು ಈ ರೀತಿ ವಿಂಗ ಡಿಸಬಹುದು

## ಹರಿದಾಸಸಾಹಿತ್ಯ

ಪುರಂದರದಾಸರು ಮತ್ತು ಹರಿದಾಸರ ಪೀಳಿಗೆ, ಮೋಕ್ಷ ಮಾರ್ಗ ಪ್ರದೀಪಿಕಾ, ವಿಜಯದಾಸರ ಸ್ತೋತ್ರಭಾಗ, ಪ್ರಾರ್ಥನಾಭಾಗ, ಉಪಾಸನಾಭಾಗ, ಸಾಧನಾ ಭಾಗ, ಪ್ರಮೇಯ ಭಾಗ, ತೀರ್ಥಕ್ಷೇತ್ರ ಮಹಿಮಾ, ಸೃಷ್ಟಿಪ್ರಕರಣ ಚಕ್ರಾಬ್ಜಮಂಡಲ - ಸುಳಾದಿಗಳು, ವಿಜಯದಾಸರ ಪದಗಳು, ಚರಿತ್ರೆ, ವೇಂಕಟೇಶ ಮಹಾತ್ಮೆ, ಗೋಪಾಲದಾಸರ ಶಿಷ್ಯ ಪ್ರಶಿಷ್ಯರ ಸುಳಾದಿಗಳು, ಜಗನ್ನಾಥದಾಸರ ಶಿಷ್ಯ ಪ್ರಶಿಷ್ಯರ ಸುಳಾದಿ, ಗೋಪಾಲದಾಸರ ಪದಗಳು, ವಾಸುದೇವ ವಿಠಲರ, ವಿಜಯವಿಠಲರ ಪದಗಳು, ರಾಘವೇಂದ್ರ ಗುರುಸಾರ್ವಭೌಮ, ಇಂದಿರೇಶ ವಿಠಲ ಕೃತ ಲಕ್ಷ್ಮೀ ಲೀಲಾಮೃತ ಇತ್ಯಾದಿ

## ಗದ್ಯಸಾಹಿತ್ಯ

ಸದಾಚಾರ, ಪಂಚಭೇದ, ಬ್ರಹ್ಮಚರ್ಯ, ಆಧ್ಯಾತ್ಮ ಮಾಲಾ, ಸಂಧ್ಯೋಪಾಸನೆ, ಆಧ್ಯಾತ್ಮಿಕ ವಿವಿಧ ನಿಬಂಧಗಳು

## ಧಾರ್ಮಿಕ ಕಾವ್ಯಗಳು

ಹರಿಕಥಾಮೃತಸಾರ ಸಂಗ್ರಹ, ಹರಿವಾಯುಸ್ತುತಿ, ಪ್ರಾಕೃತ ರಾಘವೇಂದ್ರ ಸ್ತೋತ್ರ, ಶ್ರೀ ಅನಂತನ ವ್ರತಕಥಾ, ಮುಯ್ಯದ ಪದ, ಶ್ರೀ ಕೃಷ್ಣಲೀಲಾ ಮೃತ, ಸೀತಾಸ್ವಯಂವರ, ಕಾಳೀ ಸ್ವಯಂವರ, ಹನುಮದ್ವಿಲಾಸ, ಭೀಮಸೇನ ವಿಲಾಸ, ವೀರಭದ್ರ ವಿಲಾಸ, ಪಾರ್ಥವಿಲಾಸ, ಅನಿರುದ್ಧ ವಿಲಾಸ, ವಸಿಷ್ಠ - ವಿಶ್ವಾಮಿತ್ರ ಆಖ್ಯಾನ, ಶ್ರೀ ಕೃಷ್ಣಜ ಯಂತೀ ಕಥಾ, ಮನ್ಮಥವಿಲಾಸ

## ಮಹಾಕಾವ್ಯ ಶ್ರೀ ಸುಮಧ್ವವಿಜಯ

## ಶ್ರೀ ಹರಿಕಥಾಸಾರ ಟೀಕಾ

ಹರಿಕಥಾಮೃತಸಾರ ಪಂಚರತ್ನ ಟೀಕಾ (ಆರು ಸಂಪುಟ) —ಇವು ಪ್ರಕಟಿತಕೃತಿಗಳಾದರೆ, ಇನ್ನೂ 150 ಹೊತ್ತಿಗೆಗಳಲ್ಲಿ ಪ್ರಕಟವಾಗಬೇಕಾಗಿರುವ ಸಾಹಿತ್ಯವನ್ನು ಮುದ್ದಾದ ಅಕ್ಷರಗಳಲ್ಲಿ ಶುದ್ಧಪ್ರ ತಿಗೊಳಿಸಿ 15 ಸಂಪುಟಗಳಲ್ಲಿ ಬೈಂಡ್ ಮಾಡಿಸಿ (ರಟ್ಟು ಕಟ್ಟಿಸಿ) ಇಟ್ಟಿದ್ದಾರೆ

ಈ ಅಭೂತಪೂರ್ವ ಕಾರ್ಯದ ಫಲವು ವೈಯುಕ್ತಿಕವಾಗಬಾರದು ಇದು ಸಮಾಜದ ಸೊತ್ತು - ಹೀಗೆಂದು ಭಾವಿಸಿ 1944 ರಲ್ಲಿ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲವನ್ನು ಸ್ಥಾಪಿಸಿ, ತಾವು ಅವಿಶ್ರಾಂತವಾಗಿ, ತನುಮನಧನಗ ಳನ್ನು ಅರ್ಪಿಸಿ ಸಂಗ್ರಹಿಸಿದ ದಾಸಸಾಹಿತ್ಯ ಸಂಪ ದವನ್ನು - ತಾವು ಪ್ರಜಾಸತ್ತಾತ್ಮಕವಾಗಿ ಕಟ್ಟಿದ ಸಂಸ್ಥೆಗೆ ಧಾರೆಯೆರೆದರು ಮುಂದೆ ವರದೇಂದ್ರ ಹರಿದಾಸಸಾಹಿತ್ಯ ಮಂಡಲದ ಜೊತೆಗೆ, ವರ ದೇಂದ್ರ ಹರಿದಾಸ ಸಾಹಿತ್ಯ ಮಾಲೆಯನ್ನು ಆರಂ ಭಿಸಿ, ತಿಳಿಗನ್ನಡದಲ್ಲಿ ಜೀವನತತ್ವಗಳನ್ನು ಸಪ್ರಮಾ ಣವಾಗಿ ಸಾಮಾನ್ಯನಿಗೂ ತಿಳಿಯುವಂತೆ ಹೊತ್ತಿ ಗೆಗಳನ್ನು ಅರಳಿಸಿದರು ದಾಸಸಾಹಿತ್ಯ ಪ್ರಚಾರ ಕ್ಕಾಗಿಯೇ ಪ್ರತ್ಯೇಕ ಪತ್ರಿಕೆಯು ಇಲ್ಲದಿರುವುದನ್ನು ಗಮನಿಸಿ, ಆ ಕೊರತೆಯನ್ನು ನೀಗಿಸಲು, 'ಕರ್ನಾ ಟಕ ಹರಿದಾಸ ಸಾಹಿತ್ಯ' ಎಂಬ ಪ್ರಥಮವಾದ ದ್ವೈಮಾಸಿಕವನ್ನು ಆರಂಭಿಸಿದರು

ಈ ರೀತಿಯಲ್ಲಿ ಅವರು, ಅಭಿಮನ್ಯುವಿಗೂ ಮಿಗಿಲಾದ ಗಂಡು ಧೈರ್ಯದಿಂದ, ತಾವು ರೂಪಿಸಿ ಕೊಂಡಿದ್ದ ಎಲ್ಲ ಯೋಜನೆಗಳನ್ನೂ, ಒಬ್ಬ ಮನು ಷ್ಯನ ಆಯುಷ್ಯದಲ್ಲಿ ಎಷ್ಟು ಮಾಡಿ ನೀಗಿಸಬೇಕೋ ಅದಕ್ಕೂ ಮಿಗಿಲಾಗಿ ಪೂರ್ಣಗೊಳಿಸಿ ಅಭೇದ್ಯ ವೆನ್ನಿಸಿದ ಚಕ್ರವ್ಯೂಹವನ್ನು ಭೇದಿಸಿದರು ಸಾಹಿತ್ಯ ಸಂಪದವನ್ನು ಮುಕ್ತಗೊಳಿಸಿ, ವೈಜಯಂತಿಯೊಡನೆ ಶ್ರೀ ಹರಿವಾದ ಪ್ರೀತಿಯನ್ನು ಸಂಪಾದಿಸಿದರು ಶ್ರೀ ಹರಿಪದಾರವಿಂದವನ್ನು ಸೇರಿದರು

ಒಟ್ಟಾರೆ ಗೋರೆಬಾಳ ಹನುಮಂತರಾಯರು ಮಹಾಚೇತನ ಅವರು ಹರಿದಾಸಸಾಹಿತ್ಯದ ರಕ್ಷಣೆ, ಸಂಸ್ಕರಣ, ಸಂಪಾದನೆ, ಸಂಶೋಧನೆ, ಪ್ರಕಟಣೆ ಪ್ರಸಾರಗಳಿಗೆ ತೊಡಗಿದಾಗ ಕೆಲವರು ಲಘುವಾಗಿ 'ಹರಿದಾಸ ಸಾಹಿತ್ಯವು ಪಾಮರರ ಸಾಹಿತ್ಯ ಇದರಲ್ಲಿ ಅಂತಹ ಗುಣವಿಶೇಷಗಳೇನೂ ಇಲ್ಲ' ಎಂದು ಮೂಗು ಮುರಿದಿದ್ದರು ಅಂತಹ ರಿಗೆ, ರಾಯರು, "ವೇದ ಉಪನಿಷತ್ತು, ಭಾರತ, ಪಾಂಚರಾತ್ರ, ಪುರಾಣ, ಬ್ರಹ್ಮಸೂತ್ರ ಇವುಗಳ ಭಾಷ್ಯ ಟೀಕಾ ಟಿಪ್ಪಣಿ ಸಂಸ್ಕೃತ ಭಾಷೆಯಲ್ಲಿದೆ ಸಂಸ್ಕೃತ ಭಾಷಾ ತಜ್ಞರಾದ ಜ್ಞಾನಿಗಳು ವೇದವ ಣ್ಣನೆಗಳಿಗೆ ಸರ್ವಭಾಷಾ ಅಭಿವ್ಯಂಜಕ ಶಕ್ತಿಯಿತ್ತ ಹರಿಯ ಅಜ್ಞಾನುಸಾರ, ಪ್ರಾಕೃತ ಭಾಷೆಯಲ್ಲೇ ರಚಿಸಿ, ಮೂಲ ಗ್ರಂಥಗಳ ಭಾವವನ್ನೇ ಪ್ರಕಟಿಸಿ ರುವ ಎಲ್ಲ ಹರಿದಾಸರುಗಳ ಸಾಹಿತ್ಯವು ಅತಿ ಉಚ್ಚಭಾವದಲ್ಲಿದ್ದು ಈ ಹರಿದಾಸ ಸಾಹಿತ್ಯದಲ್ಲಿ ವಿಶ್ವ ಸಾಹಿತ್ಯವೇ ತುಂಬಿ ತುಳುಕುತ್ತಿದೆ" ಎಂದು ಉತ್ತರ ನೀಡಿ, ಮುಂದುವರೆದು ಈ ಸಾಹಿತ್ಯದ ಅಪೂರ್ವತೆಯ ಅಂಶಗಳನ್ನು ಸ್ಪಷ್ಟವಾಗಿ ಬಿತ್ತರಿ

ಸಿದ್ಧರೆ ಅವುಗಳಲ್ಲಿ ಪ್ರಮುಖವಾದುವುಗಳನ್ನು ಇಲ್ಲಿ ಸಂಗ್ರಹಿಸಬಹುದು

1 ಸಕಲ ವೇದಪುರಾಣ ಶಾಸ್ತ್ರಗಳನ್ನು ತಿರುಳುಗನ್ನಡದಲ್ಲಿ ಸಂಗ್ರಹಿಸಿರುವುದು

2 ಹಳೆಗನ್ನಡ, ನಡುಗನ್ನಡ ಹೊಸಗನ್ನಡ - ಭಾಷಾ ವೈಲಕ್ಷಣ್ಯಗಳಿಗೆ ಸ್ಪಷ್ಟ ಬೆಡಗುಗಳ ಅಗರವಾಗಿರುವುದು

3 ಸಂಗೀತಕ್ಕೂ ಸಾಹಿತ್ಯಕ್ಕೂ ಇರುವ ಅನ್ಯೋನ್ಯ ಸಂಬಂಧ, ವಾದ್ಯ ವಿಶೇಷಗಳ ಬಳಕೆಯಿಂದ ಸಾಹಿತ್ಯ ಇನ್ನಷ್ಟು ಸುಶ್ರಾವ್ಯವಾಗುವುದು

4 ಜನವರ ಭಾಷೆಗೆ ಸ್ಥಾನ, ಮತಮತಾಂತರವ ಕಲಹಗಳ ನಿವಾರಣೆ, ಸಮನ್ವಯತೆ, ಸಹಿಷ್ಣುತೆ, ಪರಸ್ಪರ ಪ್ರೀತಿ ಹುಟ್ಟಿಸುವ ನೀತಿ ಧರ್ಮಗಳು - ಇವುಗಳ ಪ್ರತಿಪಾದನೆ ಮತ್ತು ಅನುಷ್ಠಾನ

5 ಸೃಷ್ಟಿಕ್ರಮಾದಿ ವೈಜ್ಞಾನಿಕ ವಿಷಯಗಳ ನಿರೂಪಣೆ

ಹೀಗೆ ಇಂತಹ ಮಹತ್ವದ ಅಂಶಗಳನ್ನೊಳಗೊಂಡು, ಇಡೀ ಮಾನವಕುಲವನ್ನು ಉದ್ಧಾರಮಾಡುವ ಪ್ರವೃತ್ತಿಯಿಂದ "ಹುಚ್ಚಪ್ಪಗಳಿರಾ ಮಾನವ ಧರ್ಮ [illegible]ದು" ಎಂದು ಸಾರಿ ಇಹಲೋಕದಲ್ಲಿಯೇ ವೈಕುಂಠವನ್ನು ತಂದಿಳಿಸುವಲ್ಲಿ, ಆತ್ಮವಿಶ್ವಾಸವನ್ನು ತಂದುಕೊಟ್ಟದ್ದು ಹರಿದಾಸಸಾಹಿತ್ಯ ಎಂಬುದನ್ನು ಅವರು ತಮ್ಮ ಜೀವನವನ್ನೇ ಶಬ್ದಾರ್ಥವಾಗಿಸಿ ಸ್ಪಷ್ಟಪಡಿಸಿದರು

ಈ ವಿವರಣೆಯಲ್ಲಿ ಗೋರೆಬಾಳರು ತಮ್ಮ ಜೀವಿತ ಕಾಲವನ್ನೆಲ್ಲ ಸದ್ವಿನಿಯೋಗಿಸಿ ಅಭಿಮಾನಧನರಾಗಿ ನಡೆದು ತೋರಿದ ಸಾಧನೆಯ ಸ್ಪಷ್ಟ ರೇಖೆಗಳು ಮೂಡಿವೆ ಈ ಹಿನ್ನೆಲೆಯಲ್ಲಿ ಅವರು ಪ್ರಕಟಿಸಿದ ಸಾಹಿತ್ಯ ಅಪೂರ್ವ ಅವರಿತ್ತ ಈ ಕೊಡುಗೆಯಿಂದ ಕನ್ನಡತಾಯಿ ಐಸಿರಿಯ ಗರಿಮೆ ವಿಶ್ವತೋ ಬಾಹು, ವಿಶ್ವತೋ ಚಕ್ಷು ಆಗಿದೆ ಆದರೆ ಇವೆಲ್ಲ ಸುಫಲವಾಬೇಕಾದರೆ, ಪ್ರಜಾಪ್ರಭುತ್ವದ ಕನಸನ್ನು ನ[illegible]ಯುತ್ತಿರುವ ನಾವೆಲ್ಲ, ಜನವರವಾಗಿ ಜನಬದ[illegible]ಲೆಂದು ಮೂಡಿಬಂದ ಈ ಹರಿದಾಸ ಸಾಹಿ[illegible]ವನ್ನು, ವೈಜ್ಞಾನಿಕ ರೀತಿಯಲ್ಲಿ ಅಧ್ಯಯನ ಅಧ[illegible]ವನ ಮಾಡಲು, ಬದುಕಿನಲ್ಲಿ ಆ ಮೌಲ್ಯಗಳನ್ನ[illegible] ರೂಢಿಸಿಕೊಳ್ಳಲು, ಅದಕ್ಕೆ ಅರ್ಥವಿಲ್ಲದೆ ಅಂ[illegible] ಕೊಂಡಿರುವ ಮಡಿವಂತಿಕೆಯನ್ನು ನಿವಾರಿಸಲು ಪ್ರತ್ಯೇಕವಾದ ದಾಸಸಾಹಿತ್ಯ ಪೀಠವನ್ನು ಕಟ್ಟ[illegible]ಕಾಗಿದೆ ಆ ದಿಸೆಯಲ್ಲಿ, ಗೋರೆಬಾಳ ಹನುಮ[illegible]ತರಾಯರ ಜನ್ಮಶತಮಾನೋತ್ಸವದ ಈ ಅ[illegible]ಣೋದಯದಲ್ಲಿ, ಸರಕಾರವು ಗುಲಬರ್ಗಾ ವಿ[illegible]ವಿದ್ಯಾಲಯದಲ್ಲಿ ದಾಸಸಾಹಿತ್ಯ ಪೀಠವನ್ನು ಸ್ಥಾ[illegible]ಸುವುದರ ಮೂಲಕ ಅವರ ಜನ್ಮಶತಮಾನೋ[illegible]ವವನ್ನು ಅರ್ಥಪೂರ್ಣ ಮಾಡಬೇಕು ಇ[illegible]ರಿಂದ ಸಮಾಜದ ನೈತಿಕ ಮೌಲ್ಯಗಳಿಗೆ ಚೇತ[illegible]ಬಂದೀತು, ಹಿರಿಯ ಚೇತನಕ್ಕೆ ಸಂತೃಪ್ತಿಯು ಆದೀತು,

---

# ತಿರುಪತಿಯ ಸ್ಥಳೀಯ ದೇವಾಲಯ ದರ್ಶಿನಿ

ತಿರುಪತಿಗೆ ಬರುವ ಯಾತ್ರಿಕರು ಶ್ರೀವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ ತಿ ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ ಈ ಬಸ್‌ನಲ್ಲಿ ಹೊರಟು,

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು ( ೨ ಗಂಟೆಗಳಲ್ಲಿ )

ಬಸ್ ಹೊರಡುವ ಸ್ಥಳ ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೇಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ ಬೆಳಗ್ಗೆ ೬-೦೦, ಬೆಳಗ್ಗೆ ೧೦-೦೦, ಸಂಜೆ ೩-೦೦
ಬಸ್ ಪ್ರಯಾಣದ ದರ ಒಂದು ಟಿಕೆಟ್ಟಿಗೆ ೧೮ ರೂ ಮಾತ್ರ, ಕಿರಿಯರಿಗೆ ಅರ್ಧ ಟಿಕೆಟ್,
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ)
ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ

**ತಿ ತಿ ದೇ**

# ರಕ್ಷಿಸು ರಕ್ಷಿಸು ಶ್ರೀರಾಮಚಂದಿರ

ಜಿ ಎಸ್ ಗುಂಡಪ್ಪ



ರಕ್ಷಿಸು ರಕ್ಷಿಸು ಶ್ರೀರಾಮ ಚಂದಿರ |
ಇಕ್ಷ್ವಾಕು ವಂಶದ ಅತ್ಯಂತ ಸುಂದರ || ಪ ||

ಕೌಸಲ್ಯಾ ಸುತ ದಶರಥ ರಾಮ |
ಆಶ್ರಿತ ಜನಕೇ ಶಾಂತಿಯ ಧಾಮ ||
ರಘುಕುಲ ನಂದನ ಮೇಘಶ್ಯಾಮ |
ಜಗದಲಿ ಕೀರ್ತಿಯ ಪಡೆದಿಹ ನಾಮ || ರಕ್ಷಿಸು ||

ಶಿವಧನುವನ್ನು ನೀನಂದು ಮುರಿದೆ |
ಸೀತೆಯ ಪಾವನ ಕರವ ಪಿಡಿದೆ ||
ಶಬರಿಯು ಕಚ್ಚಿದ ಹಣ್ಣನು ತಿಂದೆ |
ಜಗಜನಕೆಲ್ಲ ಅಚ್ಚರಿ ತಂದೆ || ರಕ್ಷಿಸು ||

ನಮ್ಮಯ ತಿನಿಸು ನಿನ್ನಯ ಭಿಕ್ಷೆ |
ನಮ್ಮಯ ಬಾಳಿಗೆ ನೀನೆ ರಕ್ಷೆ ||
ರಕ್ಕಸಹಾರೀ ಶ್ರೀಹರಿ ಶೌರಿ |
ದುರ್ಗಮ ಕಾನನ ತೀರ್ಥ ವಿಹಾರಿ || ರಕ್ಷಿಸು ||

ಕೇವಲ ನಿನ್ನ ಪಾದದ ಸ್ಪರ್ಶ |
ಅಹಲ್ಯೆಗೆ ನೀಡಿತು ಮೋಕ್ಷ ||
ಪರಮ ಭಕ್ತ ಹನುಮಗೆ ಒಲಿದೆ |
ಪರಶುಧರನ ಗರ್ವವ ಮುರಿದೆ || ರಕ್ಷಿಸು ||



ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ-

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ ತಿ ದೇ ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನು ಕಳುಹಿಸಬೇಕು ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗದಿ ಆಗಿರುವ ದತ್ತಿಯ ಮೌಲ್ಯ ರೂ 3 ಲಕ್ಷ ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ, ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ವೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದು ಬಾರಿಗೆ 10 ಶತಾಂಶ) ನಂತೆ, ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ ತಿ ದೇ ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು) ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ ಬರೆಯಿರಿ

**ಕಾರ್ಯನಿರ್ವಹಣಾಧಿಕಾರಿ**

ತಿ ತಿ ದೇ ತಿರುಪತಿ

# ಪ್ರಾತಿಧೇಯೀ

ಮೊಟ್ಟಮೊದಲನೆಯದಾದ ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮಮಾನಸಪುತ್ರನಾದ ಅಥರ್ವಣ ಮಹರ್ಷಿಯಿಂದ ಕರ್ದಮ ಪುತ್ರಿಯಾದ ಶಾಂತಿ ಅಥವಾ ಚಿತ್ತಿ ಎಂಬುವಳಲ್ಲಿ ಮೂವರು ಪುತ್ರರು ಜನಿಸಿದರು ಧೃತವ್ರತ, ದಧೀಚ (ಚಿ), ಅಥರ್ವಶಿರ ಎಂಬುವರೇ ಆ ಮೂವರು ಪುತ್ರರು ಇವರಲ್ಲಿ ದಧೀಚಿಯು ಓರ್ವ ಮಹಾನ್ ಋಷಿಯಾಗಿದ್ದ

ಒಮ್ಮೆ ಈತ ಇಂದ್ರನನ್ನು ಕುರಿತು ತವಸ್ಸು ಮಾಡಿದ ಆತ ಪ್ರತ್ಯಕ್ಷನಾಗಿ ಈತನಿಗೆ ಮಧು (ಬ್ರಹ್ಮ) ವಿದ್ಯೆ ಹಾಗೂ ಪ್ರವರ್ಗ ವಿದ್ಯೆಯನ್ನು ಉಪದೇಶಿಸಿ, ಆ ವಿದ್ಯೆಗಳನ್ನು ಯಾರಿಗಾದರೂ ಉಪದೇಶಿಸಿದಲ್ಲಿ ಅವನ ತಲೆ ಉರುಳಿ ಬೀಳುವುದೆಂದು ತಿಳಿಸಿದ್ದನು

ಕೆಲಪು ವರ್ಷಗಳ ನಂತರ ಅಶ್ವಿನೀ ದೇವತೆಗಳು ದಧೀಚಿಯ ಬಳಿಗೆ ಬಂದು, ತಮಗೆ ಮಧುವಿದ್ಯೆಯನ್ನು ಉಪದೇಶಿಸಬೇಕೆಂದು ಬೇಡಿಕೊಂಡರು

ದಧೀಚಿಯು ಇಂದ್ರನ ಶಾಸನವನ್ನು ಅವರಿಗೆ ತಿಳಿಸಿದನು ಆಗ ಅಶ್ವಿನೀ ದೇವತೆಗಳು ಅವನ ತಲೆಯನ್ನು ತೆಗೆದಿಟ್ಟು, ಆ ಜಾಗದಲ್ಲಿ ಕುದುರೆ ತಲೆಯನ್ನು ಜೋಡಿಸಿ, ಆತನಿಂದ ಬ್ರಹ್ಮವಿದ್ಯೆಯ ಉಪದೇಶ ಪಡೆದರು

ಈ ಸಮಾಚಾರವನ್ನು ತಿಳಿದ ಕೂಡಲೇ ಕೋಪಗೊಂಡು ಬಂದ ಇಂದ್ರನು ದಧೀಚಿಯ ತಲೆಯನ್ನು ತರಿದ

ಆ ನಂತರದಲ್ಲಿ ದಧೀಚಿಯು ಇಂದ್ರನ ಶಿಷ್ಯನಾದರೂ ಅಶ್ವಿನೀ ದೇವತೆಗಳಿಗೆ ಗುರುವಾದ

ಕಾಲ ಕಾಲದಲ್ಲಿ ಇಂದ್ರನಿಗೂ ಈ ವಿಚಾರ ಗೊತ್ತಾಗಿ ದಧೀಚಿಯ ಮೇಲಿದ್ದ ಕೋಪವನ್ನು ದೂರ ಮಾಡಿಕೊಂಡು, ಆತನೊಂದಿಗೆ ಸ್ನೇಹದಿಂದ ಇದ್ದನು

ಇಂತಹ ಮಹಾನ್ ಋಷಿಯ ಧರ್ಮಪತ್ನಿಯೇ ಪ್ರಾತಿಧೇಯೀ ಈಕೆಯು ವಿದರ್ಭರಾಜನ ಮಗಳು ಹಾಗೂ ಲೋಪಾಮುದ್ರೆಯ ಸಹೋದರಿಯೂ ಆಗಿದ್ದಳು

ಈಕೆಯು ತನ್ನ ಅಕ್ಕನಾದ ಲೋಪಾಮುದ್ರೆಯ ಗುಣಗಳಿಂ ಪ್ರಾಭಾವಿತಳಾಗಿದ್ದಳು ಆಕೆಯು ಅಗಸ್ತ್ಯನನ್ನು ಮದುವೆಯಾದಂತೆ, ತಾನೂ ಓರ್ವ ತಾಪಸಿಯನ್ನು ಮದುವೆಯಾಗಬೇಕೆಂದು ಇಷ್ಟಪಟ್ಟಳು

ಮಹರ್ಷಿ ದಧೀಚಿಯ ಬಗ್ಗೆ ಬಹಳಷ್ಟು ಕೇಳಿದ್ದಳು ಅವಳಿಗೆ ಅರಿವಿಲ್ಲದಂತೆಯೆ ಅವಳು ಆ ಮಹರ್ಷಿಯ ದಯೆ ಹಾಗೂ ಉಪಕಾರಗುಣಗಳಿಗೆ ಮಾರು ಹೋಗಿದ್ದಳು ಇದರಿಂದ ಆಕೆಯ ತಂದೆಗೆ ಬೇರೆ ದಾರಿ ಇಲ್ಲದೆ, ದಧೀಚಿಯನ್ನು ಭೇಟಿ ಮಾಡಿ, ತನ್ನ ಪುತ್ರಿಯಾದ ಪ್ರಾತಿಧೇಯಿಯನ್ನು ವಿವಾಹವಾಗುವಂತೆ ಬಿನ್ನವಿಸಿಕೊಂಡ ಅಂತೆಯೇ ಆತ ಪ್ರಾತಿಧೇಯಿಯನ್ನು ವಿವಾಹವಾದನು

ಮದುವೆಯಾದ ಮೇಲೆ ಗಂಡನ ಮನೆಗೆ ಬಂದ ಪ್ರಾತಿಧೇಯಿಯು ಆ ಪತಿಗೆ ತಕ್ಕ ಪತ್ನಿಯಾಗಿ ಜೀವನ ನಿರ್ವಹಿಸತೊಡಗಿದಳು ಪತಿಯ ಸೇವೆಯ ನಂತರ ಸದಾ ಕಠೋರ ತಪಸ್ಸಿನಲ್ಲಿ

ಗೃಹಲಕ್ಷ್ಮಿ

ಮಗ್ನಳಾಗಿರುತ್ತಿದ್ದಳು ಪತಿಯ ಸೂಕ್ತ ಸಹಚಾರಿಣಿಯಾಗಿ, ಅವನ ಸೇವೆಯಲ್ಲಿ ನಿರತಳಾಗಿರುತ್ತಿದ್ದಳು

ಆ ತಪೋವನದಲ್ಲಿನ ಪ್ರತಿಯೊಂದು ಪ್ರಾಣಿಯನ್ನು ತನ್ನ ಮಗುವಿನಂತೆ ಪ್ರೀತಿಸಿ, ಪಾಲಿಸುತ್ತಿದ್ದಳು ಮರ, ಬಳ್ಳಿಗಳ ಮೇಲೂ ಕೂಡ ಈಕೆಯು ಇದೇ ರೀತಿಯ ಪ್ರೀತಿ, ಸ್ನೇಹಗಳನ್ನು ತೋರುತ್ತಾ, ಅವುಗಳನ್ನು ಬೆಳೆಸುತ್ತಿದ್ದಳು ಇದರ ಫಲವಾಗಿ ಪ್ರಾಣಿ ಹಾಗೂ ಸಸ್ಯ ಸಮೂಹವು ಆಕೆಯನ್ನು ಅಪರಿಮಿತವಾಗಿ ಪ್ರೀತಿಸುತ್ತಿದ್ದವು

ಆಶ್ರಮವಾಸಿಗಳಿಗೆ ಮರ, ಬಳ್ಳಿಗಳು ಜಡವಸ್ತುಗಳಾಗಿದ್ದರೂ, ಪ್ರಾತಿಧೇಯಿಗೆ ಮಾತ್ರ ಚೇತನ ಜೀವಿಗಳಂತೆಯೇ ಕಾಣಿಸುತ್ತಿದ್ದವು ಅವು ಅವಳೊಂದಿಗೆ ಸಂಭಾಷಿಸುತ್ತಿದ್ದಂತೆ, ತಮ್ಮ ದುಃಖವನ್ನು ಹೇಳಿಕೊಳ್ಳುತ್ತಿರುವಂತೆ ಭಾಸವಾಗುತ್ತಿತ್ತು

ಅಂತೆಯೇ ಅವೂ ಕೂಡ ಅವಳ ಆಜ್ಞೆಯನ್ನು ಪಾಲಿಸುತ್ತಿವೆಯೊ ಏನೊ ಎನ್ನುವಂತೆ ವರ್ತಿಸುತ್ತಿದ್ದವು

ತಪೋವನದಲ್ಲಿರುವ ವೃಕ್ಷಗಳೆಲ್ಲವೂ ಪ್ರಾತಿಧೇಯಿಯ ಕೇಳುವುದಕ್ಕೆ ಮುಂಚೆಯೆ, ಅವಳ ಅಪೇಕ್ಷೆಗಿಂತ ಹೆಚ್ಚಾಗಿಯೇ, ಫಲಪುಷ್ಪಗಳನ್ನು ನೀಡುತ್ತಿದ್ದವು

ಈ ರೀತಿಯಲ್ಲಿ ಈಕೆಯು ತನ್ನ ಸದ್ಗುಣಗಳಿಂದ, ಸೇವಾಮನೋಭಾವದಿಂದ ಭಾರತ ವರ್ಷದ ಪತಿವ್ರತಾ ಸ್ತ್ರೀಯರೆಲ್ಲರಿಗಿಂತಲೂ ಉಚ್ಚವಾದ ಸ್ಥಾನವನ್ನು ಪಡೆದವಳಾಗಿದ್ದಳು

ಪುರಾಣಗಳಲ್ಲಿ ಈಕೆಗೆ ಇನ್ನೂ ಎರಡು ಹೆಸರುಗಳು ಇದ್ದವೆಂಬುದನ್ನು ಸ್ಪಷ್ಟವಾಗಿವೆ ಅವು ಯಾವುವೆಂದರೆ ಗಭಸ್ತಿನೀ ಹಾಗೂ ಬಡವಾ ಎಂದು

ಒಮ್ಮೆ ಇಂದ್ರನು ತನ್ನ ಎಲ್ಲ ದೇವತೆಗಳೊಂದಿಗೆ ದಧೀಚಿಯ ಆಶ್ರಮವನ್ನು ಪ್ರವೇಶಿಸಿದನು ಈಗ ಇಂದ್ರನಿಗೂ, ದಧೀಚಿಗೂ ಉತ್ತಮ ಬಾಂಧವ್ಯವಿದ್ದುದರಿಂದ ಇಂದ್ರನು ಆಗಾಗ್ಗೆ ಆ ಆಶ್ರಮಕ್ಕೆ ಬಂದು ಹೋಗುತ್ತಿದ್ದನು

ದೇವತೆಗಳು ದೈತ್ಯರನ್ನು ಎಲ್ಲ ರೀತಿಯ ಯುದ್ಧಗಳಲ್ಲಿಯೂ ಸೋಲಿಸಿ, ಅವರನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿದ್ದರು ಇನ್ನು ಅವರು ತಲ ಎತ್ತುವುದು ಕಷ್ಟಕರವಾಗಿತ್ತು ಅಷ್ಟೊಂದು ಬಲಹೀನರಾಗಿ ಅವರನ್ನು ಪದಾಕ್ರಾಂತರನ್ನಾಗಿ ಮಾಡಲಾಗಿತ್ತು ಇನ್ನು ಅವರು ತಮ್ಮ ಮೇಲೆ ಯುದ್ಧ ಮಾಡಲಾರರು ಎಂದು ತೀರ್ಮಾನಿಸಿದ ದೇವತೆಗಳು ತಮ್ಮ ಆಯುಧಗಳಿಗೆ ಏನೂ ಕೆಲಸವಿಲ್ಲ ಎಂದು ತೀರ್ಮಾನಿಸಿದರು

ಅವರು ದಧೀಚಿಯ ದರ್ಶನ ಮಾಡಿ, ಆತನನ್ನು ವಂದಿಸಿದರು ಎಲ್ಲ ದೇವತೆಗಳನ್ನೂ ತಮ್ಮ ಆಶ್ರಮದಲ್ಲಿ ನೋಡಿ, ಸಂತೋಷಗೊಂಡ ಮಹರ್ಷಿಯು ಬೇರೆ ಬೇರೆಯಾಗಿಯೇ ಎಲ್ಲ ದೇವತೆಗಳನ್ನೂ ಪೂಜಿಸಿದನು ಪ್ರಾತಿಧೇಯಿಯೂ ಕೂಡ ತನ್ನ ಪತಿಯೊಂದಿಗೆ ಅತಿಥಿ ಸತ್ಕಾರದಲ್ಲಿ ಪೂರ್ಣರೂಪದ ಸಹಕಾರವನ್ನು ನೀಡಿದಳು

ಆಗ ಇಂದ್ರನು ತಾನು ಬಂದಿರುವ ಕಾರಣವನ್ನು ತಿಳಿಸಿದನು ಅವರುಗಳು ತಮ್ಮಲ್ಲಿನ ತೇಜಸ್ವೀ ದಿವ್ಯಾಸ್ತ್ರಗಳಿಂದ ದಾನವರನ್ನು ಪೂರ್ತಿ

ರಘುಸುತ

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

## ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫ ೦೦ | ಪ್ರಾ ೫ ೩೦ |
| ವಿಶ್ವರೂಪ ಸರ್ವದರ್ಶನ | ಪ್ರಾ ೫ ೩೦ | ಪ್ರಾ ೭ ೦೦ |
| ತೋಮಾಲ ಸೇವೆ (ಆರ್ಜಿತ) | ಪ್ರಾ ೭ ೩೦ | ಪ್ರಾ ೮ ೦೦ |
| ಅರ್ಚನೆ (ಆರ್ಜಿತ) | ಪ್ರಾ ೮.೦೦ | ಪ್ರಾ ೮ ೩೦ |
| ಸರ್ವದರ್ಶನ | ಪ್ರಾ ೯-೦೦ | ಮ ೧೨ ೩೦ |
| | ಮ ೧ ೦೦ | ಸಂ ೬ ೦೦ |
| | ರಾ ೭ ೦೦ | ರಾ ೮ ೪೫ |
| ಏಕಾಂತಸೇವೆ | | ರಾ ೯ ೦೦ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫ ೩೦ ರಿಂದ ಪ್ರಾ ೬-೩೦ ರ ವರೆಗೆ ಮಾತ್ರ

## ಆರ್ಜಿತ ಸೇವೆಗಳು

| | | |
|---|---|---|
| ೧ | ಗರುಡವಾಹನ | ೩೨ ೦೦ |
| ೨ | ಚಂದ್ರಪ್ರಭ ವಾಹನ | ೩೨ ೦೦ |
| ೩ | ಗಜವಾಹನ | ೩೨ ೦೦ |
| ೪ | ಅಶ್ವವಾಹನ | ೩೨ ೦೦ |
| ೫ | ಸಿಂಹವಾಹನ | ೩೨ ೦೦ |
| ೬ | ಹಂಸವಾಹನ | ೩೨ ೦೦ |
| ೭ | ಚಿಕ್ಕಶೇಷವಾಹನ | ೩೨ ೦೦ |
| ೮ | ದೊಡ್ಡ ಶೇಷವಾಹನ | ೬೨ ೦೦ |
| ೯ | ಸೂರ್ಯಪ್ರಭವಾಹನ | ೬೨ ೦೦ |

## ಪಡಿಪ್ರಸಾದಗಳು

| | | |
|---|---|---|
| ೧ | ದೋಸೆ ಕಾಲಸೋಲ | ೩೫-೦೦ |
| ೨ | ದಧ್ಯೋದನ " | ೪೦-೦೦ |
| ೩ | ಪುಳಿಯೋಗರೆ " | ೫೦ ೦೦ |
| ೪ | ಪೊಂಗಲು " | ೫೫ ೦೦ |
| ೫ | ಸಕ್ಕರಪೊಂಗಲ್ " | ೬೫ ೦೦ |
| ೬ | ಶಾಕರ ಭಾತ್ " | ೮೫ ೦೦ |
| ೭ | ಕೇಸರಿಭಾತ್ " | ೯೦ ೦೦ |
| ೮ | ಸೀರ " | ೧೫೫-೦೦ |

ವಿವರಗಳಿಗೆ
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ

ಯಾಗಿ ಪರಾಜಯಗೊಳಿಸಿದ್ದಾರೆ ಇನ್ನು ಅವುಗಳ ಅವಶ್ಯಕತೆ ಇಲ್ಲ ಅದರಿಂದ ಅವುಗಳನ್ನು ಒಂದು ಸುರಕ್ಷಿತ ಸ್ಥಾನದಲ್ಲಿ ಭದ್ರಪಡಿಸಬೇಕೆಂದಿದ್ದಾರೆ ದಧೀಚಿಯ ತಪಸ್ಸಿನ ಹಾಗೂ ಪ್ರಾತಿಥೇಯಿಯ ಪಾತಿವ್ರತ್ಯದ ಪ್ರಭಾವದಿಂದ ಆತನ ಆಶ್ರಮವು ಸುರಕ್ಷಿತವಾದುದು ದೈತ್ಯರೂ ಅಲ್ಲಿಗೆ ಬರಲಾರರು ಅವರಿಗೆ ಆ ಧೈರ್ಯವಿಲ್ಲ ಆದುದರಿಂದ ತಮ್ಮ ದಿವ್ಯಾಸ್ತ್ರಗಳನ್ನು ಆತನ ಆಶ್ರಮದಲ್ಲಿಡಲು ಅನುಮತಿ ನೀಡಬೇಕೆಂದು ದಧೀಚಿಯನ್ನು ಪ್ರಾರ್ಥಿಸಿದನು ದಧೀಚಿಯು ಕೂಡಲೇ ಒಪ್ಪಿಗೆ ನೀಡಿದ

ಆದರೆ ಅದೇ ಸಮಯದಲ್ಲಿ ಅಲ್ಲಿಯೇ ಇದ್ದ ಆತನ ಪತ್ನಿ ಪ್ರಾತಿಥೇಯಿಯು ಆ ಶಸ್ತ್ರಗಳನ್ನು ತಮ್ಮ ಆಶ್ರಮದಲ್ಲಿ ಇರಿಸಿಕೊಳ್ಳುವುದರ ವಿವೇಚನೆಯ ಬಗ್ಗೆ ಚಿಂತಿಸತೊಡಗಿದಳು ಹಾಗೆ ಮಾಡುವುದು ಆಶ್ರಮದ ಮರ್ಯಾದೆಗೆ ಅನುರೂಪವಾಗಿರುವುದಿಲ್ಲ ಎಂಬುದನ್ನು ಅವಳು ಗ್ರಹಿಸಿದಳು

"ಪ್ರಾಣೇಶ್ವರ! ಇತರರ ಧನ, ಆಸ್ತಿಗಳನ್ನು ಸಾಧುಸತ್ಪುರುಷರು ತಮ್ಮಲ್ಲಿ ರಕ್ಷಿಸಿ ಇಟ್ಟುಕೊಳ್ಳುವುದು ಯಾರಿಗೂ, ಯಾವ ಕಾಲದಲ್ಲಿಯೂ ಒಪ್ಪಿಗೆಯಾದುದಲ್ಲ ಅದು ತುಂಬಾ ಜವಾಬ್ದಾರಿಯಿಂದ ಕೂಡಿದ್ದಲ್ಲದೆ, ಪ್ರಾಣಘಾತಕವಾಗಿರುತ್ತದೆ ಆದುದರಿಂದ ರಕ್ಷಣಾಭಾರವನ್ನು ಒಪ್ಪಿಕೊಳ್ಳಬೇಡಿ" ಎಂದು ಸಮಯೋಚಿತ ಸಲಹೆಯನ್ನು ಅವಳು ನೀಡಿದಳು

ಇದನ್ನು ಆಲಿಸಿದ ದಧೀಚಿಯು ಹೀಗೆಂದನು,

"ದೇವಿ! ನೀನು ಹೇಳುವುದೇನೊ ಸರಿಯೆ! ಆದರೆ ಈಗಾಗಲೇ ನನ್ನ ಬಾಯಿಯಿಂದ 'ಆಗಲಿ' ಎನ್ನುವ ಒಪ್ಪಿಗೆಯ ಮಾತು ಹೊರ ಬಂದಿದೆ ಇದಕ್ಕೆ ವ್ಯತಿರೇಕವಾಗಿ 'ಆಗುವುದಿಲ್ಲ' ಎನ್ನುವ ಮಾತನ್ನು ಆಡಲಾರದವನಾಗಿದ್ದೇನೆ ಈಗ ಕೊಟ್ಟ ಮಾತನ್ನು ಉಳಿಸಿಕೊಳ್ಳುವುದರ ವಿನಹ ಬೇರೆ ಯಾವ ದಾರಿಯೂ ಇಲ್ಲ ಇದು ವಿಧಿಯ ವೈಚಿತ್ರ್ಯವಷ್ಟೇ ಹೊರತು ಬೇರೇನೂ ಇಲ್ಲ"

ಇದೆಲ್ಲವೂ ವಿಧಿಲಿಖಿತ, ಅದರ ಎದುರುಗಡೆ ತನ್ನ ಯಾವುದೇ ಪ್ರಯತ್ನವೂ ವ್ಯರ್ಥ ಎಂದುಕೊಂಡಳವಳು ಆದುದರಿಂದ ತನ್ನ ಮಾತನ್ನು ಒತ್ತಾಯಿಸುವುದನ್ನು ಬಿಟ್ಟುಬಿಟ್ಟಳು

ತಾವು ಬಂದ ಕೆಲಸವಾದುದರಿಂದ ದೇವತೆಗಳು ಒಂದು ಗೊತ್ತಾದ ಸ್ಥಳದಲ್ಲಿ ತಮ್ಮ ದಿವ್ಯಾಸ್ತ್ರಗಳನ್ನು ಬಚ್ಚಿಟ್ಟು ಮಹರ್ಷಿಗೂ, ಆತನ ಪತ್ನಿಗೂ ವಂದಿಸಿ, ಅಲ್ಲಿಂದ ಹೊರಟುಹೋದರು

ದಧೀಚಿಯು ಸಂತೋಷದಿಂದ ದಿನಗಳನ್ನು ನೂಕತೊಡಗಿದ ಪ್ರಾತಿಥೇಯಿಯೂ ಕೂಡ ತನ್ನ ಧರ್ಮವನ್ನು ಪಾಲಿಸುತ್ತಾ ತಪಸ್ಸಿನಲ್ಲಿ ತಲ್ಲೀನಳಾದಳು

ಹೀಗೆ ಒಂದು ಸಾವಿರ ದಿವ್ಯವರ್ಷಗಳು ಕಳೆದು ಹೋದುವು

ಹೀಗಿರುವಾಗ ತಾವು ದೇವತೆಗಳ ಅಧೀನದಲ್ಲಿ ಇರುವುದನ್ನು ಸಹಿಸದಾದ ದೈತ್ಯರು, ಇಂತಹ ಬಂಧನದಿಂದ ಬಿಡುಗಡೆ ಹೊಂದಲು ಪ್ರಯತ್ನಗಳನ್ನು ಮಾಡುತ್ತುದ್ದರು ದೇವತೆಗಳ ದಿವ್ಯಾಸ್ತ್ರಗಳೆಲ್ಲವೂ ದಧೀಚಿಯ ಬಳಿ ಇದ್ದುದು ಅವರುಗಳಿಗೆ ಗೊತ್ತೇ ಇದ್ದಿತು ಆ ಅಸ್ತ್ರಗಳು ಇಲ್ಲದಿದ್ದಲ್ಲಿ ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳಬಹುದಾಗಿತ್ತು ಆದರೆ ಆ ಅಸ್ತ್ರಗಳು ಇನ್ನೂ ಇವೆ ಹೀಗಾಗಿ ಅವರು ದಧೀಚಿಯ ಮೇಲೆ ದ್ವೇಷಸಾಧಿಸಲು ಪ್ರಾರಂಭಿಸಿದರು ಒಂದಲ್ಲ ಒಂದು ರೀತಿಯಲ್ಲಿ ಆ ಮಹರ್ಷಿಗೆ ತೊಂದರೆ ಕೊಡಲಾರಂಭಿಸಿದರು

ಈ ಉಪಟಳವನ್ನು ಸಹಿಸಲಾರದೆ ಒಂದು ದಿನ ಮಹರ್ಷಿಯು ತನ್ನ ಪತ್ನಿಗೆ ಹೀಗೆಂದನು–

"ಪ್ರಿಯೆ! ಬಹಳ ದಿನಗಳಾಗಿ ಹೋದುವು ತಮ್ಮ ದಿವ್ಯಾಸ್ತ್ರಗಳನ್ನು ತೆಗೆದುಕೊಂಡು ಹೋಗಲು ದೇವತೆಗಳು ಬರಲಿಲ್ಲ ಇತ್ತ ದೈತ್ಯರುಗಳೂ ಕೂಡ ನಮ್ಮ ಮೇಲೆ ದ್ವೇಷ ಸಾಧಿಸುವುದು ಹೆಚ್ಚಾಗುತ್ತಿದೆ ಇಂತಹ ಪರಿಸ್ಥಿತಿಯಲ್ಲಿ ನಾವೇನು ಮಾಡಬೇಕು ಎಂಬುದು ಗೊತ್ತಾಗುತ್ತಿಲ್ಲ ನಿನ್ನ ಸಲಹೆಯೇನು?"

ಆಗ ಆಕೆಯು ವಿನಯಪೂರ್ವಕವಾಗಿ ಹೀಗೆಂದಳು,

"ಸ್ವಾಮಿ! ನಾನು ಮೊದಲೆ ಇದರ ಬಗ್ಗೆ ನಿವೇದನ ಮಾಡಿಕೊಂಡೆ – ಈ ಕಾರ್ಯವು ತಮ್ಮಂತಹವರಿಗೆ ಯೋಗ್ಯವಾದುದಲ್ಲ ಎಂದು ಆದರೆ ತಾವು ಮಾತು ಕೊಟ್ಟಿರುವುದಾಗಿದೆ ಎಂದು ನನ್ನ ಮಾತನ್ನು ತಾವು ಕಿವಿಯ ಮೇಲೆಯೇ ಹಾಕಿಕೊಳ್ಳಲಿಲ್ಲ ಈ ವಿಷಯದಲ್ಲಿ ನನಗೆ ಏನು ಹೇಳಲೂ ತೋಚುತ್ತಿಲ್ಲ ನಿಮಗೆ ಹೇಗೆ ಇಷ್ಟವೊ ಹಾಗೆ ಮಾಡಿ"

ಧಧೀಚಿಯು ಇದರ ಬಗ್ಗೆ ಬಹಳವಾಗಿ ಯೋಚಿಸತೊಡಗಿದ - ದೇವತೆಗಳನ್ನು ಕರೆಯಿಸಿ ವರ ಅಸ್ತ್ರ - ಶಸ್ತ್ರಗಳನ್ನು ಅವರೇ ತೆಗೆದು ುಂಡು ಹೋಗುವಂತೆ ಹೇಳುವುದ? ಉಹೂಂ, ದು ಸರಿಯಲ್ಲ ಅವುಗಳನ್ನು ತನ್ನ ಬಳಿ ರಿಸಿಕೊಳ್ಳುತ್ತೇನೆಂದು ಮಾತು ಕೊಟ್ಟ ಮೇಲೆ ದರ ವಿರುದ್ಧವಾಗಿ ಮಾತನಾಡುವುದು ತಪ್ಪಾ ತ್ತದೆ ಅವನ್ನು ಸಾಗರ ಗರ್ಭದಲ್ಲಿಟ್ಟರೆ? ರಾಕ್ಷ ಗೆ ಅವನ್ನು ನಾಶಮಾಡುವುದು ಅಷ್ಟೊಂದು ಷ್ಟವೇನೂ ಅಲ್ಲ

ತನ್ನ ಪತಿಯು ಪಡುತ್ತಿರುವ ಅವಸ್ಥೆಯನ್ನು ೋಡಿ ಪ್ರಾತಿಥೇಯಿಯು ಮನಸ್ಸು ನೊಂದಿತು ವಳು ಹೇಳಿದಳು,

"ಸ್ವಾಮಿ! ನಿಮ್ಮ ಕಷ್ಟವನ್ನು ನೋಡಲಾರದವ ಾಗಿದ್ದೇನೆ"

"ಏನೊ ನನಗೊಂದೂ ತೋಚುತ್ತಿಲ್ಲ"

"ಹೊರಗೆ ಈ ಅಸ್ತ್ರಗಳು ಕಾಣಿಸಿಕೊಂಡರೆ ಾನೆ ತೊಂದರೆ ಬದಲಾಗಿ ಅವುಗಳನ್ನು ನನ್ನದೇ ದಲ್ಲೋ, ನಿಮ್ಮ ದೇಹದಲ್ಲೊ ಸೇರಿಸಿಕೊಂಡರೆ ೇಗೆ?"

ಎಂಬ ಉಪಾಯವನ್ನು ಸೂಚಿಸಿದಳು

ಈ ಸೂಕ್ಷ್ಮವನ್ನು ತಿಳಿದ ಮಹರ್ಷಿಗೂ ಂದು ಸದುಪಾಯವು ಹೊಳೆಯಿತು ಅಂತೆಯೇ ತನು ಆ ಆಯುಧಗಳೆಲ್ಲವನ್ನೂ ಒಂದು ಹತ್ ಪಾತ್ರೆಯಲ್ಲಿ ಇರಿಸಿ, ಅವುಗಳನ್ನು ಮಂತ್ರ ಳ ಮುಖಾಂತರ ಅಭಿಮಂತ್ರಗೊಳಿಸಿದ ನೀರಿನಲ್ಲಿ ೊಳೆದ ಕೂಡಲೇ ಆ ಆಯುಧಗಳೆಲ್ಲವೂ ಕರಗಿ, ೀರಾಗಿ, ತೊಳೆದ ನೀರಿನಲ್ಲಿ ಒಂದಾದುವು ಂತರ ಸರ್ವಾಸ್ತ್ರಮಯವಾದ ಆ ನೀರನ್ನು ಮಹ ರ್ಷಿಯು ಕುಡಿದು ಬಿಟ್ಟ ಈ ರೀತಿಯಲ್ಲಿ ಅಸ್ತ್ರಗಳೆಲ್ಲವೂ ಆತನ ದೇಹದ ಮೂಳೆಗಳಲ್ಲಿ ಂದಾಗಿ ಸೇರಿಹೋದವು ಒಂದು ರೀತಿಯಲ್ಲಿ ದರಿಂದ ಮಹರ್ಷಿಗೆ ತೃಪ್ತಿ, ಸಮಾಧಾನಗಳು ೊರೆತುವು

ಈ ಸಮಾಚಾರವು ಹೇಗೋ ದೈತರಿಗೆ ಮುಟ್ಟಿತು ಅವರಿಗೆ ಈಗ ಸಾವಿರ ಆನೆಗಳ ಲ ಬಂದಂತಾಯಿತು ದೇವತೆಗಳ ಅಸ್ತ್ರ, ಶಸ್ತ್ರ ಳು ಜೀವಂತವಾಗಿ ಇಲ್ಲದೆ ಇರುವುದು ಅವ ಗೆ ಪರೋಕ್ಷವಾಗಿ ಪ್ರೋತ್ಸಾಹ ಕೊಟ್ಟಂತಾಯಿತು ಕೂಡಲೇ ಅವರು ದೇವತೆಗಳ ಮೇಲೆ ಧಾಳಿ ಮಾಡಲು ಪ್ರಾರಂಭಿಸಿದರು

ತಮ್ಮ ಮೇಲೆ ಆಕ್ರಮಣ ಮಾಡಿದ ದೈತ್ಯರ ಪ್ರತಾಪವನ್ನು ಕಂಡು ದೇವತೆಗಳು ಭಯಭೀತರಾದರು ಅವರಿಗೆ ಈಗ ತಮ್ಮ ದಿವ್ಯಾಸ್ತ್ರಗಳ ಅವಶ್ಯಕತೆ ಉಂಟಾಯಿತು ಅದರಿಂದ ಕೂಡಲೇ ಅವರು ದಧೀಚಿಯ ಆಶ್ರಮಕ್ಕೆ ಓಡಿದರು ಅವರು ತಮ್ಮ ಅಸ್ತ್ರಗಳನ್ನು ಹಿಂದಿರುಗಿಸುವಂತೆ ಪ್ರಾರ್ಥಿಸತೊಡಗಿದರು

ಈಗ ಮಹರ್ಷಿಯು ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದ ಇನ್ನು ಮುಂದೆ ದೇವತೆಗಳಿಗೆ ತಮ್ಮ ಅಸ್ತ್ರಗಳ ಅಗತ್ಯವೇ ಬೀಳುವುದಿಲ್ಲ ಎಂದುಕೊಂಡಿದ್ದ ಆದರೆ ಅವರಿಗೆ ಈಗ ಅವುಗಳ ಅಗತ್ಯ ಹೆಚ್ಚಾಗಿದೆ ಏನಿದರ ವಿಧಿ ನಿಯಮ, ಅದೃಷ್ಟ - ದುರಾದೃಷ್ಟಗಳ ನೆರಳು - ಬೆಳಕಿನಾಟ? ತಾನು ಆ ಅಸ್ತ್ರಗಳನ್ನು ನೀರಿನಲ್ಲಿ ವಿಲೀನಮಾಡಿ, ಕುಡಿದು ಬಿಟ್ಟಿದ್ದುದು ತಪ್ಪಾಯಿತೇನೊ ಎಂದನ್ನಿಸಿತು

ಅಂತೆಯೇ ನಡೆದುದೆಲ್ಲವನ್ನೂ ಆತನು ದೇವತೆಗಳಿಗೆ ವಿವರಿಸಿದ ಪ್ರಯೋಜನವಾಗಲಿಲ್ಲ ದೇವತೆಗಳು ತಮಗೆ ತಮ್ಮ ಅಸ್ತ್ರಗಳನ್ನು ನೀಡಲೇಬೇಕೆಂದು ಬಲವಂತ ಮಾಡಿದರು ಆ ನಿರ್ಬಂಧವನ್ನು ತಡೆದುಕೊಳ್ಳಲಾರದೆ ದಧೀಚಿಯು ಹೀಗೆಂದನು,

"ನಿಮ್ಮ ಅಸ್ತ್ರಗಳೆಲ್ಲವೂ ನನ್ನ ಬೆನ್ನು ಮೂಳೆ ಹಾಗೂ ನನ್ನ ದೇಹದಲ್ಲಿನ ಇತರೆ ಮೂಳೆಗಳಲ್ಲಿ ಸೇರಿ ಹೋಗಿರುವುದರಿಂದ ನಾನೇನೂ ಮಾಡಲಾರದವನಾಗಿದ್ದೇನೆ ಆದರೂ ನಿಮಗೆ ಆ ದಿವ್ಯಾಸ್ತ್ರಗಳು ಬೇಕೇಬೇಕೆಂದರೆ ನಾನು ದೇಹತ್ಯಾಗ ಮಾಡದೆ ಬೇರೆ ದಾರಿಯೇ ಇಲ್ಲ"

ಈ ಮಾತನ್ನು ಆಲಿಸಿದ ಪ್ರಾತಿಥೇಯಿಯು ದಿಗ್ಭ್ರಮೆಗೊಂಡಳು ತನ್ನ ಜೀವನದ ಅಂತ್ಯವು ಸನ್ನಿಹಿತವಾಯಿತೆಂಬುದರ ಸತ್ಯವನ್ನು ಅವಳು ಅರಿತಳು ಆದರೆ ಅವಳು ಈ ಸತ್ಯದಿಂದ ದೂರ ಸರಿಯದಾದಳು ತನ್ನ ಪತಿಯು ಪ್ರಾಣಾರ್ಪಣೆ ಮಾಡುವುದರ ವಿನಹ ಬೇರೆ ದಾರಿಯೇ ಕಾಣಿಸಲಿಲ್ಲ ತನ್ನ ಮಾಂಗಲ್ಯವನ್ನು ಕಾಪಾಡಿಕೊಳ್ಳುವುದು ಬಹಳ ಕಷ್ಟ ಎಂಬುದನ್ನು ಅರಿತಳು ತನ್ನ ಪತಿವ್ರತಾ ಧರ್ಮದ ಪಾಲನೆ, ತಪಸ್ಸಿನ ಸಾಧನೆಗಳು ಈಗ ಯಾವ ಉಪಯೋಗಕ್ಕೂ ಬರದೆ ಇರುವುದರ ವಿಫಲ ಸನ್ನಿವೇಶವನ್ನು ಅವಳು ಅರ್ಥಮಾಡಿಕೊಂಡಳು

ತನ್ನ ಪತಿಯು ಹೇಗೆ ತನ್ನ ದೇಹತ್ಯಾಗ ಮಾಡಲು ಸಿದ್ಧನಾಗಿರುವನೊ ಹಾಗೆಯೇ ತಾನೂ ತನ್ನ ಕರ್ತವ್ಯ ಪಾಲನೆಗೆ ಸಿದ್ಧಳಾಗಲು ತೀರ್ಮಾನಿಸಿದಳು

ಮಹರ್ಷಿಯ ಮಾತುಗಳನ್ನು ಆಲಿಸಿ ದೇವತೆಗಳು ಏನನ್ನೂ ಹೇಳಲಾರದವರಾದರು ತಮ್ಮಿಂದ ಓರ್ವ ಮಹರ್ಷಿಯು ಹಾಗೂ ಅಪೂರ್ವ ಜ್ಞಾನಿಯ ಜೀವನದ ಅಂತ್ಯವಾಗುವುದನ್ನು ಸಹಿಸಲಾರದಾದರು ಆದರೆ ಅದರ ವಿನಹ ಅವರಿಗೂ ಬೇರೇ ದಾರಿಯೇ ಕಾಣಲಿಲ್ಲ

ಮಹರ್ಷಿ ದಧೀಚಿಯು ತನ್ನ ತೀರ್ಮಾನವನ್ನು ಹೇಳಿದನು, "ದೇವತೆಗಳೆ! ನಾನು ಯೋಗಬಲದಿಂದ ದೇಹತ್ಯಾಗ ಮಾಡುತ್ತೇನೆ ನೀವು ನನ್ನ ಮೂಳೆಗಳನ್ನು ತೆಗೆದುಕೊಂಡು ನಿಮಗೆ ಬೇಕಾದ ಅಸ್ತ್ರ, ಶಸ್ತ್ರಗಳನ್ನು ಮಾಡಿಕೊಳ್ಳಿ"

ಎಂದವನೆ ತನ್ನ ಪತ್ನಿಯನ್ನೊಮ್ಮೆ ನೋಡಿ, ತನ್ನ ಅಂತಿಮ ಪ್ರಯಾಣಕ್ಕೆ ಸಿದ್ಧನಾದನು

ತನ್ನ ಪತಿಯ ಮೃತ್ಯುವನ್ನು ತಾನೇ, ತನ್ನ ಕಣ್ಣುಗಳ ಎದುರುಗಡೆಯೇ ನೋಡಲು ಸಾಧ್ಯವಾಗದೆ, ಪ್ರಾತಿಥೇಯಿಯು ಪತಿಯ ಪಾದಗಳಿಗೆ ವಂದಿಸಿ, ದೃಢನಿಶ್ಚಯದಿಂದ ಅವನನ್ನು ಒಮ್ಮೆ ನೋಡಿ, ಅಲ್ಲಿಂದ ಆಶ್ರಮದ ಬೇರೆ ಭಾಗಕ್ಕೆ ಹೊರಟು ಹೋದಳು ಅಲ್ಲಿ ಧ್ಯಾನಮಗ್ನಳಾಗಿ ಕುಳಿತಳು

ಪ್ರಾತಿಥೇಯಿಯು ಎದುರುಗಡೆ ಇಲ್ಲದಿರುವುದು ದೇವತೆಗಳಿಗೆ ಒಂದು ರೀತಿಯಲ್ಲಿ ಅನುಕೂಲವೇ ಆಯಿತು ಅವರು ಆಕೆಯ ತೇಜಸ್ಸಿಗೆ ಹೆದರುತ್ತಿದ್ದರು ಆಕೆಯೇನಾದರೂ ಕೋಪಗೊಂದು ತಮಗೆ ಶಾಪ ಕೊಟ್ಟುಬಿಟ್ಟರೆ ಅದರಿಂದ ಆಕೆ ಅಲ್ಲಿ ಇಲ್ಲದಿರುವುದರ ಲಾಭ ಪಡೆದು, ಮಹರ್ಷಿಯು ತನ್ನ ತೀರ್ಮಾನವನ್ನು ಕಾರ್ಯರೂಪಕ್ಕೆ ತರಲಿ ಎಂದು ಆತುರ ಪಡಿಸಿದರು,

"ಮಹರ್ಷಿ! ತಾವು ಏನು ಮಾಡಬೇಕೆಂದಿರುವಿರೊ ಅದನ್ನು ಬೇಗ ಮಾಡಿ!"

ಅಂತೆಯೇ ದಧೀಚಿಯು ಸಮಾಧಿಸ್ಥನಾಗಿ, ಯೋಗ ಮಾರ್ಗದಲ್ಲಿ ತನ್ನ ಪ್ರಾಣದ ಪರಿತ್ಯಾಗ ಮಾಡಿದನು ದೇವತೆಗಳು ಆತನ ದೇಹವನ್ನು ಛಿದ್ರಮಾಡಿ, ಮೂಳೆಗಳನ್ನು ಆರಿಸಿ, ತೆಗೆದುಕೊಂಡು, ಸ್ವರ್ಗವನ್ನು ತಲುಪಿದರು ಅಲ್ಲಿ ವಿಶ್ವಕ

ರ್ಮನ ಮೂಲಕ ತಮತಮಗೆ ಬೇಕಾದ ಆಯುಧಗಳನ್ನು ಮಾಡಿಕೊಂಡರು ಇಂದ್ರನು ದಧೀಚಿಯ ಬೆನ್ನುಮೂಳೆಯಿಂದ ವಜ್ರಕ್ಕೆ ಸಮಾನವಾದ ವಜ್ರಾಯುಧವನ್ನು ಮಾಡಿಸಿಕೊಂಡು, ಅದನ್ನು ತಾನೇ ಇರಿಸಿಕೊಂಡನು

ಪ್ರಾತಿಥೇಯಿಯು ಧ್ಯಾನದಿಂದ ಎಚ್ಚೆತ್ತು, ನೀರಿನಿಂದ ತುಂಬಿದ ಕಳಶ ಹಾಗೂ ಹೂವು ಹಣ್ಣುಗಳ ಸಮೇತ ಪಾರ್ವತಿಯ ಪೂಜೆ ಮಾಡಿದಳು ನಂತರ ತನ್ನ ಪತಿಯು ಇದ್ದ ಆಶ್ರಮದ ಕಡೆ ಬಂದಳು

ಆಗ ಅವಳು ಗರ್ಭವತಿಯಾಗಿದ್ದಳು

ಆಶ್ರಮದ ಒಳಭಾಗದಲ್ಲಿ ಪತಿಯು ಇಲ್ಲದುದನ್ನು ಅವಳು ಗಮನಿಸಿ, ಆತನ ಬಗ್ಗೆ ಅಲ್ಲಿದ್ದ ಅಗ್ನಿದೇವನನ್ನು ಪ್ರಶ್ನಿಸಿದಳು

ಆಶ್ರಮದ ಹಿಂಭಾಗದಲ್ಲಿ ವಿಶಾಲ ವೃಕ್ಷದ ನೆರಳಿನಲ್ಲಿ ಛಿದ್ರ ಛಿದ್ರವಾಗಿದ್ದ ತನ್ನ ಪತಿಯ ದೇಹವನ್ನು ನೋಡಿ, ಅವಳಿಗೆ ದುಃಖ ಉಮ್ಮಳಿಸಿ ಬಂದಿತು ಪ್ರಜ್ಞೆ ತಪ್ಪಿ, ನೆಲದ ಮೇಲೆ ಬಿದ್ದುಬಿಟ್ಟಳು

ನಂತರ ನಿಧಾನವಾಗಿ ಪ್ರಜ್ಞೆ ತಳೆದಳು

ಸತ್ಯವನ್ನು ಅರಿತರೂ, ನೈಜತೆಯನ್ನು ಎದುರಿಸುವುದು ಎಷ್ಟು ಕಷ್ಟ ಎಂಬುದನ್ನು ಅರಿತಳು ಉಕ್ಕಿ ಬಂದ ನೋವು, ದುಃಖಗಳನ್ನು ಸಹಿಸಿಕೊಳ್ಳುತ್ತಾ,

ನಾನು ದೇವತೆಗಳಿಗೆ ಶಾಪ ಕೊಡಲು ಇಷ್ಟಪಡುವುದಿಲ್ಲ ಪತಿಯ ಉಳಿದಿರುವ ಅಂಗಾಂಗಗಳೊಂದಿಗೆ ಕೂಡಲೆ ಅಗ್ನಿಪ್ರವೇಶ ಮಾಡುವೆನು ನಾನಿನ್ನು ಜೀವಂತಳಾಗಿದ್ದು ಸಾಧಿಸಬೇಕಾದುದೇನು? ಪ್ರಪಂಚದಲ್ಲಿ ಜನಿಸಿದ, ನಿರ್ಮಾಣಗೊಂಡ ಪ್ರತಿಯೊಂದು ವಸ್ತುವೂ, ಜೀವವೂ ನಶ್ವರವಾದುದು ಅದು ಒಂದಲ್ಲ ಒಂದು ದಿನ ನಾಶವಾಗಲೇಬೇಕು

ಉತ್ಪದ್ಯತೆ ಯತ್ತು ವಿನಾಶಿಸರ್ವಂ ನ
ಶೋಚ್ಯಮಸ್ತೀತಿ ಮನುಷ್ಯಲೋಕೇ
ಗೋವಿಪ್ರದೇವಾರ್ಥಮಿಹ ತ್ಯಜಂತಿ ಪ್ರಾಣಾನ್
ಪ್ರಿಯಾನ್ ಪುಣ್ಯ ಭಾಜೋ ಮನುಷ್ಯಾ:||

ಎನ್ನುವಂತೆ ಗೋವು, ಬ್ರಾಹ್ಮಣರು, ದೇವತೆಗಳಿಗಾಗಿ ತಮ್ಮ ಪ್ರೀತಿಯ ಪ್ರಾಣಗಳನ್ನು ತ್ಯಾಗ ಮಾಡುವವರು ಮಾನವರಲ್ಲಿ ಅತ್ಯಂತ ಪುಣ್ಯ ಭಾಜನರಾಗುವರು ಆದುದರಿಂದ ನಾಶವಾಗುವ ಜೀವಕ್ಕಾಗಿ ಏತಕ್ಕಾದರೂ ದುಃಖಿಸಬೇಕು?"

ಎಂದು ಹೇಳಿದ ಪ್ರಾತಿಥೇಯಿಯು ಅಗ್ನಿದೇವನನ್ನು ಯಥೋಚಿತ ರೀತಿಯಲ್ಲಿ ಪೂಜಿಸಿದಳು ನಂತರ ಗರ್ಭಸಮೇತ ಅಗ್ನಿಪ್ರವೇಶ ಮಾಡಲು ಇಷ್ಟವಿಲ್ಲದೆ ತನ್ನ ಹೊಟ್ಟೆಯನ್ನು ಸೀಳಿ, ಗರ್ಭದಲ್ಲಿನ ಪುತ್ರನನ್ನು ಹೊರತೆಗೆದು, ಅಲ್ಲಿನ ಗೋದಾವರಿ ನದಿ, ಭೂದೇವಿ ಹಾಗೂ ಆಶ್ರಮದಲ್ಲಿನ ಮರ ಬಳ್ಳಿಗಳಿಗೆ ತನ್ನ ಮಗನನ್ನು ಪೋಷಿಸಿ, ಬೆಳೆಸುವ ಜವಾಬ್ದಾರಿಯನ್ನು ವಹಿಸಿ, ಅವುಗಳೆಲ್ಲವುಗಳಿಗೂ ವಂದಿಸಿದಳು ನಂತರ ಪತಿಯ ಅಳಿದುಳಿದ ದೇಹದ ಛಿದ್ರಗಳನ್ನೆಲ್ಲ ಚಿತೆಯಲ್ಲಿರಿಸಿ, ಸ್ವತಃ ಅದನ್ನು ಪ್ರವೇಶಿಸಿದಳು

ಈ ರೀತಿಯಲ್ಲಿ ಪ್ರಾತಿಥೇಯಿಯು ಪತಿಯನ್ನೆನೆಯುತ್ತಾ, ಆತನ ಬಗ್ಗೆ ಯೋಚಿಸುತ್ತಾ, ತನ್ನ ನಶ್ವರ ಶರೀರವನ್ನು ತ್ಯಾಗಮಾಡಿ, ಪತಿಯೊಂದಿಗೆ ದಿವ್ಯಲೋಕವನ್ನು ಪಡೆದಳು

ಆಕೆಯ ಮಗನನ್ನು ಪಿಪ್ಪಲವೃಕ್ಷಗಳು ತಮ್ಮ ಹಣ್ಣುಗಳನ್ನು ತಿನ್ನಿಸಿ, ಬೆಳೆಸಿ, ದೊಡ್ಡವನನ್ನಾಗಿ ಮಾಡಿದುವು ಆದುದರಿಂದ ಆತನನ್ನು ಪಿಪ್ಪಲಾದ' ಎಂಬ ಹೆಸರಿನಿಂದ ಪ್ರಖ್ಯಾತನಾದ ಮುಂದೆ ಈತನು ಓರ್ವ ಮಹಾನ್ ವ್ಯಕ್ತಿಯಾಗಿ, ತನ್ನ ತಂದೆಯಂತೆಯೇ ಮಹರ್ಷಿಯೂ ಆದ

***

# ವಾರ್ತಾಲಹರಿ

## ವೈಭವದ ರಥಸಪ್ತಮಿ

ರಥಸಪ್ತಮಿ ಉತ್ಸವದ ಪ್ರಯುಕ್ತ ಫೆಬ್ರವರಿ ೧೦ ಂದು ಸೋಮವಾರ ತಿರುಮಲೆಯ ಶ್ರೀ ವೆಂಕ ೇಶ್ವರಸ್ವಾಮಿ ಆಲಯದಲ್ಲಿ ಪ್ರತ್ಯೇಕ ಕಾರ್ಯ ಮಗಳು ವೈಭವದಿಂದ ನಡೆದವು ಬೆಳಗ್ಗೆ -೩೦ ರಿಂದ ೮-೩೦ ಸೂರ್ಯಪ್ರಭವಾಹನದಲ್ಲಿ ಸ್ವಾಮಿಯನ್ನು ಆಸೀನಗೊಳಿಸಿ ಮೆರವಣಿಗೆ ಮಾಡ ಲಾಯಿತು ೯ ರಿಂದ ೧೦ರವರೆಗೆ ಚಿಕ್ಕ ಶೇಷ ವಾಹನ, ೧೧ ರಿಂದ ೧೨ ರವರೆಗೆ ಗರುಡವಾ ಹನ, ಮಧ್ಯಾಹ್ನ ೧ ರಿಂದ ೨ ವರೆಗೆ ಹನು ಮಂತವಾಹನ, ಸಂಜೆ ೪ ರಿಂದ ೫ ರವರೆಗೆ ಲ್ಪ ವೃಕ್ಷವಾಹನ, ರಾತ್ರಿ ೬ ರಿಂದ ೭ ರವ ರೆಗೆ ಸರ್ವಭೂಪಾಲವಾಹನ ರಾತ್ರಿ ೮ ರಿಂದ - ರವರೆಗೆ ಚಂದ್ರಪ್ರಭವಾಹನಗಳಲ್ಲಿ ಸ್ವಾಮಿಯ ಮೆರವಣಿಗೆ ತಿರುಮಲೆಯ ರಥಬೀದಿಗಳಲ್ಲಿ ಹೊರ ವಾಗ ಇಡೀ ತಿರುಮಲೆ ಭಕ್ತರಿಂದ ತುಂಬಿಹೋ ಗಿದ್ದಿತು ತಮಿಳು ನಾಡಿನ ಭಕ್ತರು ಅತ್ಯಧಿಕ ಸಂಖ್ಯೆಯಲ್ಲಿ ಆಗಮಿಸಿದ್ದರು ತಿರುಮಲೆಯಲ್ಲಿನ ಎಲ್ಲ ವಸತಿ ಗೃಹಗಳೂ ತುಂಬಿಹೋಗಿದ್ದವು ರಥಸಪ್ತಮಿ ಉತ್ಸವಗಳಲ್ಲಿ ತಿ ತಿ ದೇ ಧರ್ಮಕ ರ್ತರ ಮಂಡಳಿಯ ಅಧ್ಯಕ್ಷ ಶ್ರೀ ಟಿ ಸುಬ್ಬರಾ ಮಿರೆಡ್ಡಿ ಯವರು ಸತೀಸಹಿತರಾಗಿ ಪಾಲುಗೊಂ ಡರು ಆಂಧ್ರಪ್ರದೇಶದ ಮುಜರಾಯಿ ಇಲಾಖಾ ಮಂತ್ರಿ ಶ್ರೀ ಕನುಮೂರಿ ಬಾಪಿರಾಜು ಅವರೂ ಸ್ವಾಮಿಯ ಮೆರವಣಿಗೆಯಲ್ಲಿ ಪಾಲುಗೊಂಡಿದ್ದರು

## ನಯನಾನಂದಕರ ಗೋವಿಂದರಾಜಸ್ವಾಮಿ ಪ್ಲವೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಪುಷ್ಕರಿಣಿಯಲ್ಲಿ ನಡೆಯುವ ವಾರ್ಷಿಕ ಪ್ಲವೋತ್ಸವ ಈ ಬಾರಿ ಫೆಬ್ರವರಿ ೧೪ ರಿಂದ ೧೮ ರವರೆಗೆ ಐದು ದಿನ ಗಳ ಕಾಲ ವಿಜೃಂಭಣೆಯಿಂದ ನಡೆದು ನಯ ನಾನಂದಕರವಾಗಿ ಸಾಂಗವಾಯಿತು ಗುರುವಾರ ದಂದು ರಾತ್ರಿ ಶ್ರೀ ಕೋದಂಡರಾಮಸ್ವಾಮಿಯವ ರನ್ನು ಪುರವೀಥಿಗಳಲ್ಲಿ ಮೆರವಣಿಗೆಯಲ್ಲಿ ಬಿಜಯ ಮಾಡಿಸಿ ಶಾಸ್ತ್ರೋಕ್ತವಾಗಿ ತೆಪ್ಪಕೊಳಕ್ಕೆ ಕರೆತಂದು ಪ್ಲವೋತ್ಸವ ನಡೆಸಲಾಯಿತು ಮಾರನೆಯ ದಿನ ಆಂಡಾಳ್ ತಾಯಾರ್ ಸಹಿತ ಶ್ರೀಕೃಷ್ಣ ಸ್ವಾಮಿ ಯವರನ್ನು ಮೆರವಣಿಗೆಯಲ್ಲಿ ಕರೆತಂದು ತೆಪ್ಪವ ನ್ನೇರಿಸಿ ಸರೋವರ ವಿಹಾರ ಮಾಡಲಾಯಿತು ನಂತರ ಮೂರುದಿನ ಶ್ರೀ ಗೋವಿಂದರಾಜಸ್ವಾಮಿ ಯವರಿಗೆ ತೆಪ್ಪೋತ್ಸವ, ವೈಭವದಿಂದ ಭಕ್ತಿಯಿಂದ ವಿಜೃಂಭಣೆಯಿಂದ ನಡೆಯಿತು

ಈ ಪ್ಲವೋತ್ಸವ ಸಂದರ್ಭದಿಂದಾಗಿ ಪುಷ್ಕ ರಿಣಿಯನ್ನು ಪರಿಶುಭ್ರಗೊಳಿಸಿ, ಹೊಸ ನೀರು ತುಂಬಿಸಿ ಪುಷ್ಕರಿಣಿ ಪ್ರಾಂಗಣವನ್ನು ಬಣ್ಣಬಣ್ಣದ ವಿದ್ಯುತ್ ದೀಪಗಳಿಂದ ಜಗಜಗಾಯಮಾನ ವಾಗಿಸಿ, ಮಂತ್ರ ಘೋಷದಿಂದ ಪರಿಸರವನ್ನು ತುಂಬಿ ಭಕ್ತರಿಗೆ ಹೊಸ ಅನುಭವ ದೊರೆಯು ವಂತೆ ಮಾಡಲಾಯಿತು ಪ್ರತಿದಿನ ಸಂಜೆ ೭ ರಿಂದ ೮ ರವರೆಗೆ ನಡೆದ ತೆಪ್ಪೋತ್ಸವಗಳಲ್ಲಿ ಬಹು ಸಂಖ್ಯೆಯ ಭಕ್ತರು ಭಾಗವಹಿಸಿದ್ದರು

## ಕುಲಶೇಖರ ಜಯಂತಿ

ತಿರುಪತಿಯ ಅನ್ನಮಾಚಾರ್ಯ ಕಲಾಮಂದಿ ರದಲ್ಲಿ ೧೫-೨-೯೨ ರಂದು ಶನಿವಾರ ಸಂಜೆ ಕುಲಶೇಖರಾಳ್ವಾರ್ ಜಯಂತಿ ಬೋಧಪ್ರದವಾಗಿ ನಡೆಯಿತು

## ತಿ.ತಿ.ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು

* ತಿರುಪತಿಯಲ್ಲಿ ತಿ ತಿ ದೇ ಗಳು ನಿರ್ವಹಿಸುತ್ತಿರುವ ಬಾಲಾಜಿ ವಿಕಲಾಂಗರ ಚಿಕಿತ್ಸಾ ಕೇಂದ್ರಕ್ಕೆ (ಬರ್ಡ್) ಅಭಿವೃದ್ಧಿ ಪರಿಕರಗಳಿಗಾಗಿ ಇಪ್ಪತ್ತೆರಡು ಲಕ್ಷರೂಪಾಯಿಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ ಹೆಚ್ಚುತ್ತಿರುವ ಬೇಡಿಕೆಯ ದೃಷ್ಟಿಯಿಂದ ಈ ಸಂಸ್ಥೆಯಲ್ಲಿನ ನೂರು ಹಾಸಿಗೆಗಳ ಜೊತೆಗೆ ಮತ್ತೂ ಐವತ್ತು ಹಾಸಿಗೆಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ ಎಂದು ತಿ ತಿ ದೇ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ತಿ ಸುಬ್ಬರಾಮಿರೆಡ್ಡಿ ಅವರು ತಿಳಿಸಿದ್ದಾರೆ ಈ ಐವತ್ತು ಹಾಸಿಗೆಗಳನ್ನೂ ಕೇಂದ್ರ ಆಸ್ಪತ್ರೆಯ ಮೇಲಂತಸ್ತಿನಲ್ಲಿ ನಿರ್ಮಿಸುವ ಹೊಸದ ಕಟ್ಟಡ ದಲ್ಲಿ ಏರ್ಪಡಿಸಲಾಗುವುದು

* ತಿ ತಿ ದೇ ಪ್ರಕಟನೆಗಳ ವಿಭಾಗದಲ್ಲಿ ಮತ್ತೂ ಒಬ್ಬ ಸಂಪಾದಕರಾಗಿ ಶ್ರೀ ಪೊತ್ತೂರಿ ವೆಂಕಟೇಶ್ವರ ರಾವ್ ಅವರನ್ನು ನಾಮಮಾತ್ರ ವೇತನದಲ್ಲಿ ಎರಡು ವರ್ಷಗಳಿಗಾಗಿ ನೇಮಕ ಮಾಡಬೇಕೆಂದು ತೀರ್ಮಾನಿಸಲಾಯಿತು

* ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದ ಪುಷ್ಕರಿಣಿಯ ನೀರು ಸರ್ವದಾ ಪರಿಶುದ್ಧವಾಗಿರಬೇಕೆಂದೂ ಅದಕ್ಕಾಗಿ ಒಂದು ಜಲ ಪರಿಶು ಭ್ರತಾ ಯಂತ್ರಾಂಗವನ್ನುಂಟು ಮಾಡಬೇಕೆಂದೂ, ಮೂರುತಿಂಗಳಲ್ಲಿ ಈ ಕಾರ್ಯ ಕ್ರಮ ಪೂರ್ಣವಾಗಬೇಕೆಂದೂ ತೀರ್ಮಾನಿಸಲಾಯಿತು

* ತಿರುಮಲೆಯಲ್ಲಿ ಸ್ವಾಮಿಗೆಂದು ತಯಾರಾಗುತ್ತಿರುವ ನೂತನ ಸ್ವರ್ಣರಥವನ್ನು ಸೆಪ್ಟಂ ಬರ್ ೧೯೯೨ ರೊಳಗೆ ಸಿದ್ಧಗೊಳಿಸಬೇಕೆಂದು ತೀರ್ಮಾನಿಸಲಾಯಿತು

* ಆಂಧ್ರಪ್ರದೇಶದಲ್ಲಿ ಎಂದೋ ಪ್ರತಿಪಾದಿತವಾಗಿ ಪ್ರಸ್ತುತ ನಿರ್ಮಾಣದಲ್ಲಿರುವ ೧೫೩ ಕಲ್ಯಾಣ ಮಂಟಪಗಳ ನಿರ್ಮಾಣ ವೆಚ್ಚಗಳಿಗಾಗಿ ೨೮ ಕೋಟಿ ರೂಗ ಳನ್ನು ಮಂಜೂರು ಮಾಡಲಾಗಿದ್ದು, ಈ ಕಲ್ಯಾಣ ಮಂಟಪಗಳು ಇನ್ನು ಶೀಘ್ರವಾಗಿ ಪೂರ್ಣ ನಿರ್ಮಾಣಗೊಳ್ಳುವಂತಾಗಿದೆ

* ಲಾಡು ಬೆಲೆ ಪ್ರತಿಯೊಂದಕ್ಕೆ ನಾಲ್ಕು ರೂಪಾಯಿ ಮಾತ್ರವಾಗಿದ್ದು ವರ್ಷಕ್ಕೆ ೭೫ ಕೋಟಿ ರೂಗಳ ನಷ್ಟ ಬರುತ್ತಿದೆಯಾದರೂ, (ನಿರ್ಮಾಣದರ ಪ್ರತಿಲಾಡುವಿಗೆ— ರೂ 7-50)ಲಾಡುದರವನ್ನು ಹೆಚ್ಚಿಸುವ ಯೋಚನೆ ಮಾಡಿಲ್ಲವೆಂದೂ ಅಧ್ಯಕ್ಷರು ನುಡಿದರು

# ವೈಭವದ ಕಪಿಲೇಶ್ವರಸ್ವಾಮಿ ಬ್ರಹ್ಮೋತ್ಸವ



**ತಿರುಪತಿಯ ಕಪಿಲೇಶ್ವರ ಸ್ವಾಮಿ ಆಲಯದಲ್ಲಿ** ವೈಭವದಿಂದ ಶಿವರಾತ್ರಿ ಸಂದರ್ಭದ ಶ್ರೀ ಕಪಿ ಲೇಶ್ವರ ಸ್ವಾಮಿ ಬ್ರಹ್ಮೋತ್ಸವಗಳು ಫೆಬ್ರವರಿ ೨೭ ರಿಂದ ಆರುದಿನಗಳ ಕಾಲ ನಡೆದವು ಮಾರ್ಚ್ ೧ ರಂದು ಶಿವರಾತ್ರಿ, ನಂದಿವಾಹನೋತ್ಸವ ೨ ರಂದು, ಕಲ್ಯಾಣೋತ್ಸವ ಮೂರರಂದು , ನಾಲ್ಕ ರಂದು ಊಂಜಲ್‌ಸೇವೆ, ಐದರಂದು ತ್ರಿಶೂಲ ಸ್ನಾನಗಳು ಸಾವಿರಾರು ಮಂದಿ ಭಕ್ತರು ಭಾಗ ವಹಿಸುವುದರಿಂದ ಯಶಸ್ವಿಯಾದವು ದಿನವೂ ಸಂಜೆ ಶಿವಕಥಾ ಕಾಲಕ್ಷೇಪ, ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾಕಾರರಿಂದ ಸಂಗೀತ ಸಭೆಗಳು ನಡೆ ದವು ಶಿವರಾತ್ರಿಯ ಬ್ರಹ್ಮೋತ್ಸವಗಳ ಸಂದ ರ್ಭದಲ್ಲಿ ತಿ ತಿ ದೇ ಧಾರ್ಮಿಕ ಗ್ರಂಥಗಳ ಪ್ರದ ರ್ಶನ, ರಿಯಾಯಿತಿ ದರದ ಮಾರಾಟ ವ್ಯವ ಸ್ಥೆಯೂ ಉಂಟಾಗಿದ್ದಿತು





ಶ್ರೀ ವೆಂಕಟೇಶ್ವರವಿಶ್ವವಿದ್ಯಾಲಯದಪ್ರಾಚಾರ್ಯ ಟಿ ರಂಗಸ್ವಾಮಿ ಅವರು ಅಧ್ಯಕ್ಷತೆ ವಹಿಸಿದ್ದ ಸಭೆ ಯಲ್ಲಿ ಕುಲಶೇಖರರ ಹಿರಿಮೆಯನ್ನು ಕುರಿತು ಡಾ|| ಕೆ ಸರ್ವೋತ್ತಮರಾವ್ ಹಾಗೂ ಡಾ|| ಶೌರಿ ರಾಜನ್ ಅವರು ಮಾತನಾಡಿದರು ಕುಲಶೇಖರ ಆಳ್ವಾರರ ಚರಿತ್ರೆಯನ್ನು ಜನಪ್ರಿಯ ಸಂಪುಟಗಳಲ್ಲಿ ಪ್ರಕಟಿಸಿ ಸರ್ವರೂ ತಿಳಿಯಲು ಅನುಕೂಲವಾಗು ವಂತೆ ಮಾಡಬೇಕಾದ ಅಗತ್ಯವಿದೆ ಎಂದೂ ಅದ ಕ್ಕಾಗಿ ತಿ ತಿ ದೇ ಗಳು ಮುಂದೆ ಬರಬೇಕೆಂದೂ, ಅಧ್ಯಕ್ಷ ಪೀಠದಿಂದ ಪ್ರಾಚಾರ್ಯ ರಂಗಸ್ವಾಮಿ ಅವರು ಕರೆನೀಡಿದರು

ತಿ ತಿ ದೇ ಗಳ ಪರವಾಗಿ ಅಧ್ಯಕ್ಷರನ್ನು ತಿ ತಿ ದೇ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಟಿ ಜನಾರ್ದನ ನಾಯುಡು ಅವರು ಸನ್ಮಾನಿಸಿದರು ತಿ ತಿ ದೇ ಪ್ರಾಜೆಕ್ಟ್ ಆಫೀಸರ್ ಶ್ರೀ ಕೆ ಶ್ರೀನಿವಾ ಸುಲು ಸೆಟ್ಟಿ, ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವಿಶೇಷಾಧಿಕಾರಿ ಶ್ರೀ ಎಂ ವರದರಾಜನ್ ಅವ ರುಗಳೂ ಮಾತನಾಡಿದರು

## ತಿ ತಿ ದೇ ಗಳಿಗೆ ಕುದುರೆಗಳ ಕಾಣಿಕೆ

ಬೆಂಗಳೂರಿನ ಮೂವರು ದಾನಿಗಳು ತಿ ತಿ ದೇವಸ್ಥಾನಗಳಲ್ಲಿ ಸ್ವಾಮಿ ಸೇವೆಗೆಂದು ನಾಲ್ಕು ಕುದುರೆಗಳನ್ನು ಕಾಣಿಕೆಯಾಗಿ ನೀಡಿದ್ದಾರೆ ಬೆಂಗ ಳೂರಿನ ಟರ್ಫ್‌ಕ್ಲಬ್ ಆವರಣದಲ್ಲಿ ಸರ್ವಶ್ರೀ ಎನ್ ಆರ್ ರೂಯಾ, ಕರುಣಾಕರನ್, ಲಿಂಗೇಶ್, ಅವರುಗಳು ಕುದುರೆಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರಿಗೆ ನೀಡಿದರು ಸುಧ, ಜಯ ಲಕ್ಷ್ಮಿ, ವಿಜಯಲಕ್ಷ್ಮಿ, ಸರಸ್ವತಿ, -ಹೆಸರಿನ ಈ ಕುದುರೆಗಳನ್ನು ಪ್ರತ್ಯೇಕ ವಾಹನದಲ್ಲಿ ಬೆಂಗಳೂ ರಿನಿಂದ ತಿರುಮಲೆಗೆ ತರಲಾಯಿತು

## ಉಚಿತ ನೇತ್ರಚಿಕಿತ್ಸಾ ಶಿಬಿರ

ತಿರುಮಲೆ ತಿರುಪತಿ ದೇವಸ್ಥಾನಗಳು ಪ್ರತಿ ವರ್ಷ ತಿರುಪತಿಯಲ್ಲಿ ನಡೆಸುವ ಉಚಿತ ನೇತ್ರ ಚಿಕಿತ್ಸಾ ಶಿಬಿರ ಈ ಬಾರಿ ಫೆಬ್ರವರಿಯಲ್ಲಿ ೧೫, ೧೬ ನೇ ದಿನಾಂಕಗಳಲ್ಲಿ ತಿರುಪತಿಯ ಮೂರನೇ ಧರ್ಮಸತ್ರದಲ್ಲಿ ನಡೆಯಿತು ಹೈದರಾಬಾದಿನ ಸರೋಜಿನೀದೇವಿ ನೇತ್ರ ಚಿಕಿತ್ಸಾಲಯದ ಸೂಪ ರಿಂಟೆಂಡೆಂಟ್ ವೈದ್ಯ ಶ್ರೀ ಪಿ ರಂಗಾರೆಡ್ಡಿ ಅವರು ನೇತ್ರ ಶಸ್ತ್ರಚಿಕಿತ್ಸೆಗಳನ್ನು ನಿರ್ವಹಿಸಿದರು ೧೫

ಂದು ನೇತ್ರ ಪರೀಕ್ಷೆಗಳೂ ೧೭ ರಂದು ಶಸ್ತ್ರ ಚಿಕಿತ್ಸೆಗಳೂ ನಡೆದವು ೬೦೫ ಮಂದಿ ಪುರುಷರೂ ೮೫ ಮಂದಿ ಸ್ತ್ರೀಯರೂ ನೇತ್ರ ಪರೀಕ್ಷೆಮಾಡಿ ಕೊಂಡರು ಮೊದಲದಿನದ ಶಸ್ತ್ರ ಚಿಕಿತ್ಸೆಯಲ್ಲಿ ೫೦ ಕ್ಕೂ ಹೆಚ್ಚಿನ ಮಂದಿಗೆ ನೇತ್ರ ಶಸ್ತ್ರ ಚಿಕಿತ್ಸೆ ಡೆಸಲಾಯಿತು

ಶಸ್ತ್ರ ಚಿಕಿತ್ಸೆಗೆಂದು ಬಂದವರಿಗೆ ತಿ ತಿ ದೇ ಉಚಿತ ಭೋಜನ, ವಸತಿ ಸೌಕರ್ಯಗಳನ್ನು ರ್ಪಡಿಸಿದ್ದಿತು ಎಸ್ ವಿ ಆರ್ಟ್ಸ್ ಶಾಶಾಲೆಯ ವಿದ್ಯಾರ್ಥಿಗಳು ಪದ್ಮಾವತೀ ಗ್ರಿ ಕಾಲೇಜಿನ ವಿದ್ಯಾರ್ಥಿನಿಯರೂ ಸ್ವಯಂಸೇವಕರಾಗಿ ಕೆಲಸ ನಿರ್ವಹಿಸಿದರು ಔಷಧಗಳು, ನ್ನಡಕಗಳನ್ನು ಉಚಿತವಾಗಿ ನೀಡಲಾಯಿತು

## ಆಯುರ್ವೇದ ಶಾಸ್ತ್ರಜ್ಞ ಸಮ್ಮೇಳನ

ತಿರುಪತಿಯ ಶ್ರೀ ವೆಂಕಟೇಶ್ವರ ಆಯುರ್ವೇದ ಕಾಲೇಜಿನ ೧೩ನೇ ವಾರ್ಷಿಕೋತ್ಸವ ಹಾಗೂ ಆಯುರ್ವೇದ ಶಾಸ್ತ್ರಜ್ಞರ ಸಮ್ಮೇಳನ ಮಾರ್ಚ್ ,೮ ರಂದು ಯಶಸ್ವಿಯಾಗಿ ನಡೆಯಿತು

ಆಯುರ್ವೇದ ಶಾಸ್ತ್ರಜ್ಞ ಪರಿಷದ್ ವ್ಯವಸ್ಥಾಪಕ ಅಧ್ಯಕ್ಷ ಡಾ|| ಶೇಷಗಿರಿರಾವ್ ಅವರ ಅಧ್ಯಕ್ಷತೆಯಲ್ಲಿ ಸಮ್ಮೇಳನವನ್ನು ಆರಂಭಿಸಿದ ತಿ ತಿ ದೇ ಸಂರಕ್ಷಣಾಧಿಕಾರಿ ಶ್ರೀ ವೈ ಎಸ್ ಎಸ್ ಶರ್ಮ ಅವರು 'ಆಯುರ್ವೇದದ ಅಭಿವೃದ್ಧಿಗೆ ತಿ ತಿ ದೇ ಗಳ ಸಹಕಾರ ಸರ್ವದಾ ಸಿದ್ಧವೆಂದೂ, ವೈದ್ಯ ರಂಗದಲ್ಲಿ ನಿರಂತರ ನಡೆಯುತ್ತಿರುವ ಪರಿಶೋಧನೆ, ಆವಿಷ್ಕಾರಗಳನ್ನು ಅವಗತಮಾಡಿಕೊಂಡು, ವೈದ್ಯರು ಮಾನವಸೇವಾ ಯಜ್ಞದಲ್ಲಿ ಭಾಗವಹಿಸಬೇಕೆಂದೂ' ಕರೆನೀಡಿದರು

ಸಭಯಲ್ಲಿ ಮಾತನಾಡಿದ 'ಸೇಮ್' ನಿರ್ದೇಶಕ ಡಾ|| ಸತ್ಯನಾರಾಯಣ ಅವರು ಆಯುರ್ವೇದ, ಹೋಮಿಯೋಪತಿ, ಮತ್ತಿತರ ವೈದ್ಯ ವಿಧಾನಗಳ ನೆರವಿನಿಂದ ಸೂಪರ್‌ಸ್ಪೆಷಾಲಿಟಿ ಆಸ್ಪತ್ರೆ ಕೆಲಸಮಾಡುತ್ತದೆಯೆಂದು ತಿಳಿಸುತ್ತ ಮೊದಲಿಗೆ ಅನುವಂಶೀಕವಾಗಿ ಬಂದ ಆಯುರ್ವೇದ ಸಂಪ್ರದಾಯಗಳಿಂದ ಬಿಡುಗಡೆ ಹೊಂದಿ ಎಲ್ಲರ ಸ್ವತ್ತಾಗಿ ನಡೆದಿದೆಯೆಂದೂ, ಹಾಗಾಗಿ ಒಳ್ಳೆಯ ಭವಿಷ್ಯದ ಬಗ್ಗೆ ಭರವಸೆಯಿಂದ ಮಾತನಾಡಬಹುದು ಎಂದೂ ನುಡಿದರು ಕಾಲೇಜಿನ ಪ್ರಾಂಶುಪಾಲ ಶ್ರೀ ಎಸ್ ಪಿ ದೀಕ್ಷಿತ್, ಸ್ವಯಂಪ್ರಕಾಶ್, ಡಾ|| ಜೋಷಿ ಮತ್ತಿತರರು ಸಭೆಯಲ್ಲಿ ಪಾಲು ಗೊಂಡಿದ್ದರು

ಹಲವಾರು ವಿದ್ವತ್ ಪ್ರಸಂಗಗಳು ನಡೆದವು ಆಯುರ್ವೇದವನ್ನು ಜನಪ್ರಿಯಗೊಳಿಸುವ ಬಗೆಗಳು, ದೈನಂದಿನ ಜೀವನದಲ್ಲಿ ಬರತಕ್ಕ ರೋಗಗಳಿಗೆ ಸಾಧಾರಣ ಬಳಕೆಯ ಔಷಧಿಗಳು ಮೊದಲಾದ ವಿಷಯಗಳಲ್ಲಿ ಗೋಷ್ಠಿಗಳಾಗಿ ಬೋಧಪ್ರದವಾಗಿ ಸಮ್ಮೇಳನ ನಡೆದಿತು

ಸಮಾರೋಪ ಸಮಾರಂಭದಲ್ಲಿ ಸ್ಥಳೀಯ ಸಂಸ್ಕೃತ ವಿಶ್ವವಿದ್ಯಾಲಯದ ಉಪಕುಲಪತಿ ಡಾ|| ಎನ್ ಎಸ್ ಆರ್ ತಾತಾಚಾರ್ಯ ಅವರು ಭಾಗವಹಿಸಿ ಮಾತನಾಡುತ್ತ, ವೇದಗಳ ಒಂದು ಭಾಗವೇ ಆಯುರ್ವೇದವೆಂದೂ, ಇದರಿಂದ ಮನುಷ್ಯನ ಆಯು ವೃದ್ಧಿಯಾಗುವುದೆಂದೂ ತಿಳಿಸುತ್ತ ಪ್ರಸ್ತುತದ ವೈದ್ಯವಿಧಾನ ಹೇಳಿಕೊಳ್ಳುವ ಮಟ್ಟದ್ದಲ್ಲವಾಗಿ, ತಿರುಪತಿಯಲ್ಲಿ ಆಯುರ್ವೇದ ವಿಶ್ವವಿದ್ಯಾಲಯ ಸ್ಥಾಪನೆಗೆ ಕರೆನೀಡಿದರು

## ಪುರಂದರ ಆರಾಧನೆ

ತಿ ತಿ ದೇ ಗಳ ದಾಸಸಾಹಿತ್ಯ ಪ್ರಾಜೆಕ್ಟ್ ಪುರಂದರ ದಾಸರ ಆರಾಧನೆಯ ಸಂದರ್ಭದಲ್ಲಿ ತಿರುಮಲೆಯ ಮೆಟ್ಲ ಉತ್ಸವವನ್ನು ಯಶಸ್ವಿಯಾಗಿ ನಿರ್ವಹಿಸಿತು

ಪುರಂದರದಾಸರ ಜಯಂತಿ ಸಂದರ್ಭದಲ್ಲಿ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಏರ್ಪಾಡಾಗಿದ್ದ ಸಭೆಯಲ್ಲಿ ಅಧ್ಯಕ್ಷ ಪೀಠದಿಂದ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್ ಅವರು 'ಭಕ್ತಿಯಿಂದ ಬೇಡಿದರೆ ಅನುಗ್ರಹ ಪಡೆಯುವುದು ಅಸಾಧ್ಯವಲ್ಲವೆಂದು ತಿಳಿಸುತ್ತ, ದೇವರಿಗೆ ಕುಲಮತ ಪಂಥ ಲಿಂಗಭೇದವಿಲ್ಲವೆಂದೂ, ಶ್ರೀ ವೆಂಕಟೇಶ್ವರನನ್ನು ನೋಡಲು ಏಳು ಬೆಟ್ಟಗಳನ್ನೇರಬೇಕೆಂದೂ, ಪ್ರಸಾದಕ್ಕೂ ನಾಲ್ಕು ಗಂಟೆ ಕಾಯಬೇಕು ಎಂದೂ ಕಷ್ಟಪಡದೆ ಫಲವಿಲ್ಲವೆಂದರು

ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ ಡಾ|| ಮೇಡಸಾನಿ ಮೋಹನ್ ಅವರು ಮಾತನಾಡುತ್ತ ಅಂತರಂಗವನ್ನು ಬೆಳಗಿಸುವ ಶಕ್ತಿಯೇ ಭಕ್ತಿಯೆಂದು ವಿವರಣೆ ನೀಡುತ್ತ ಪ್ರಜೆಗಳಲ್ಲಿ ಭಕ್ತಿಭಾವ ಪ್ರಚೋದನೆಗಾಗಿ ಪುರಂದರದಾಸ ಅನ್ನಮಾಚಾರ್ಯ ರಂತಹವರು ಹುಟ್ಟಬರುತ್ತಾರೆ ಎಂದರು

ಸಭೆಯನ್ನು ಸ್ವಾಗತಿಸಿದ ಪೌರಸಂಬಂಧಾಧಿಕಾರಿ ಡಾ|| ರಾವುಲ ಸೂರ್ಯನಾರಾಯಣ ಮೂರ್ತಿ ಅವರು ದೈವಭಕ್ತಿಯನ್ನು ಹರಡಲು ತಿ ತಿ ದೇ ಗಳು ದೃಶ್ಯ, ಶ್ರವಣ ಯಂತ್ರಗಳ ಮೂಲಕ ಪ್ರಯತ್ನಿಸುತ್ತಿದೆಯೆಂದೂ, ಗ್ರಾಮೀಣ ಜನತೆಯಲ್ಲಿ ಧಾರ್ಮಿಕ ಮೌಲ್ಯ ಪ್ರಸಾರವಾಗುವಂತೆ ಮಾಡಲು ತಿ ತಿ ದೇ ನೆರವು ಸಿದ್ಧವೆಂದೂ ತಿಳಿಸಿದರು ಸಭೆಗೆ ಹಾಜರಾದ ಭಜನವೃಂದಗಳಿಗೆ ಶ್ರೀಮತಿ ರೇಣುಕಾ ಪ್ರಸಾದ್ ಅವರು ಜ್ಞಾಪಿಕೆಗಳನ್ನೂ, ಭಜನೆ ಪರಿಕರಗಳನ್ನೂ ನೀಡಿ ಸನ್ಮಾನಿಸಿದರು ಸಪ್ತಗಿರಿ ಸಂಪಾದಕರು ಕೆ ಸುಬ್ಬಾರಾವ್ ಅವರು ವಂದನೆಯನ್ನು ಸಮರ್ಪಿಸಿದರು

ಮಾರನೆಯದಿನ ಬೆಳಗ್ಗೆ ಅಲಿಪಿರಿಯಿಂದ ಮೆಟ್ಟಿಲ ಪೂಜೆ ಮಾಡುತ್ತ, ಸಾಮೂಹಿಕ ಭಜನೆ, ಗಾಯನಗಳ ನಡುವೆ ಕರ್ನಾಟಕ ತಮಿಳು ನಾಡುಗಳಿಂದ ಬಂದ ಭಕ್ತರು ತಿರುಮಲೆಯನ್ನು ಸೇರಿ ಸ್ವಾಮಿಯನ್ನು ಸಂದರ್ಶಿಸಿದರು

## ತಿ ತಿ ದೇ ಆಡಳಿತ ನಿರ್ವಾಹಕ ಮಂಡಳಿಯ ನೇಮಕ

ತಿರುಮಲೆ ತಿರುಪತಿ ದೇವಸ್ಥಾನಗಳ ದೈನಂದಿನ ಆಡಳಿತವನ್ನು ನಿರ್ವಹಿಸಲು ತಿ ತಿ ದೇ ಗಳ ಧರ್ಮಕರ್ತರ ಮಂಡಳಿಯ ಸದಸ್ಯರನ್ನೊಳಗೊಂಡ ಆಡಳಿತ ನಿರ್ವಾಹಕ ಮಂಡಳಿ ನೇಮಕವಾಗಿದೆ ಇದರಿಂದಾಗಿ ಹೊಸ ನಿಬಂಧನೆಗಳ ಅನುಸಾರ ಧರ್ಮಕರ್ತರ ಮಂಡಳಿ ನಡೆಯುವುದು ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯರೆಂದರೆ ತಿ ತಿ ದೇ ಅಧ್ಯಕ್ಷ ಶ್ರೀ ತಿ ಸುಬ್ಬರಾಮಿರೆಡ್ಡಿ (ಪದನಿಮಿತ್ತ ಅಧ್ಯಕ್ಷರು) ಪೂರ್ವಗೋದಾವರಿ ಎಂ ಎಲ್ ಎ ಶ್ರೀ ವೀರರಾಘವುಲು, ಮದರಾಸಿನ ಶ್ರೀಮತಿ ದಾಸರಿ ಪದ್ಮ, ಬೆಂಗಳೂರಿನ ಶ್ರೀ ಎಚ್ ಆರ್ ಬಸವರಾಜು, ಚಿತ್ತೂರು ಜಿಲ್ಲೆಯ ಶ್ರೀ ದೊರೆಸ್ವಾಮಿ ರಾಜು, ಬೊಂಬಾಯಿನ ಶ್ರೀ ಬಿ ಎಂ ಭಾಮಾ ಅವರುಗಳೂ, ಮುಜರಾಯಿ ಇಲಾಖಾ ಕಮೀಷನರ್ (ಪದನಿಮಿತ್ತ ಸದಸ್ಯರು) ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ (ಪದನಿಮಿತ್ತ ಸದಸ್ಯ ಕಾರ್ಯದರ್ಶಿ) ಆಗಿರುತ್ತಾರೆ ಇದರಿಂದಾಗಿ ಪ್ರತಿ ತಿಂಗಳೂ ಸೇರುತ್ತಿದ್ದ ತಿ ತಿ ದೇ ಧರ್ಮಕರ್ತರ ಮಂಡಳಿಯ ಸಭೆ ಇನ್ನು ಮುಂದೆ ಪ್ರತಿ ಮೂರು ತಿಂಗಳಿಗೊಮ್ಮೆ ಸೇರುವುದು ಪ್ರತಿ ತಿಂಗಳೂ ಆಡಳಿತ ನಿರ್ವಾಹಕ ಮಂಡಳಿ ಸಭೆ ಸೇರಿ ಅಗತ್ಯ ತೀರ್ಮಾನಗಳನ್ನು ತೆಗೆದುಕೊಳ್ಳುತ್ತದೆ

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ – ಮೇ 1992

**ಶಬರಿಗಿರಿ ವಾಸ**
-ಆರ್ ಜಿ ಶಾನಭಾಗ

**ಬಾಲಾಜಿ**
-ಬಿ ಎ ಗುಡಿ

**ಕವಿ ಬ್ರಹ್ಮಗೆ ನಮೋ**
-ಬ ನ ಗುಂಡೂರಾವ್

**ನೆನೆಗೋವಿಂದನ**
-ಜಿ ಎಸ್ ಗುಂಡಪ್ಪ

**ಶಂಖ**
-ಸುರೇಶಮೂನ

**ಜೊತೆಗೆ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ** ಬೆಲೆ ರೂ 1-00 ಮಾತ್ರ

ವಿಶೇಷ ಸೂಚನೆ ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ ವಾರ್ಷಿಕ ಚಂದಾ ರೂ 12-00 ಮಾತ್ರ ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದದಲ್ಲೂ ಬರೆಯಬೇಕು ಸಂಪಾದಕರು
ತಿ ತಿ ದೇ ತಿರುಪತಿ.

**ಮನವಿ**

ಕಾರಣಾಂತರಗಳಿಂದ ಸಪ್ತಗಿರಿ ಸಕಾಲದಲ್ಲಿ ಬಿಡುಗಡೆಯಾಗುತ್ತಿಲ್ಲ ಮುಂದಿನ ಸಂಚಿಕೆಗಳನ್ನು ಶೀಘ್ರದಲ್ಲಿ ಬಿಡುಗಡೆ ಮಾಡಲಾಗುತ್ತದೆ ಓದುಗರು ಏಜಂಟರು ಸಹಕರಿಸಬೇಕೆಂದು ವಿನಂತಿ
-ಸಂಪಾದಕರು

# ತಿಂಗಳಿನ ಮುಖ್ಯದಿನಗಳು

## ಮೇ – 1992

| | | |
|---|---|---|
| 5 | ಮಂಗಳವಾರ | ಪರಶುರಾಮ ಜಯಂತಿ |
| | | ತಿರುಪತಿ ಗಂಗಾಜಾತ್ರೆ ಆರಂಭ |
| 7 | ಗುರುವಾರ | ಶ್ರೀ ಭಾಷ್ಯಕಾರರ ಶಾತ್ತುಮೊರೆ |
| | | ಶ್ರೀ ಶಂಕರ ಜಯಂತಿ |
| 11 | ಸೋಮವಾರ | ನಿಜಕರ್ತರಿ |
| 12 | ಮಂಗಳವಾರ | ತಿರುಪತಿ ಗಂಗಾಜಾತ್ರೆ ಸಮಾಪ್ತಿ |
| 15 | ಶುಕ್ರವಾರ | ಶ್ರೀ ನೃಸಿಂಹಜಯಂತಿ |
| 16 | ಶನಿವಾರ | ಶ್ರೀ ಕೂರ್ಮಜಯಂತಿ |
| | | ಶ್ರೀ ಅನ್ನಮಾಚಾರ್ಯ ಜಯಂತಿ |
| 19 | ಮಂಗಳವಾರ | ನಾರಾಯಣವನದಲ್ಲಿ ಬ್ರಹ್ಮೋತ್ಸವದಂಗವಾಗಿ |
| | | ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 22 | ಶುಕ್ರವಾರ | ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ರಥೋತ್ಸವ |
| 26 | ಮಂಗಳವಾರ | ಶ್ರೀ ಹನುಮಜ್ಜಯಂತಿ |
| 28 | ಗುರುವಾರ | ಕರ್ತರಿ ತ್ಯಾಗ |

# ಸಪ್ತಗಿರಿ

ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು **ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ**

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು

೫) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ

೬) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು

ಮಿಕ್ಕ ವಿವರಗಳಿಗೆ

ಸಂಪಾದಕರು
**ಸಪ್ತಗಿರಿ**
ತಿ ತಿ ದೇವಸ್ಥಾನ, ತಿರುಪತಿ ೫೧೭೫೦೭
ಚಿತ್ತೂರು ಜಿಲ್ಲೆ, ಆಂ ಪ್ರ

Edited and Published on behalf of the T T Devasthanams by K. Subba Rao, M A. and printed
at T T D Press by M Vijayakumar Reddy, Manager, T T D Press, Tirupati 517 507

